# ನಮ್ಮ ಮಾನಸ

ಫೆಬ್ರವರಿ 2012

ಸಂಪುಟ : 5 ಸಂಚಿಕೆ : 10

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **10–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**




ಸಂಪಾದಕೀಯ

# ವೇದಿಕೆ-ಸಂಕಿರಣ-ಸಂವಾದ-ಸಂಪುಟಗಳ ಸಂಗಡ ಮತ್ತೆ
## ಬರುತೇವ ಬಂದೇ ಬರುತೇವ

1975ರಲ್ಲಿ ಪ್ರಜಾಪ್ರಭುತ್ವದ ಹಕ್ಕುಗಳಿಗಾಗಿ ತುರ್ತು ಪರಿಸ್ಥಿತಿಯ ವಿರುದ್ಧ ದೇಶದಾದ್ಯಂತ ನಡೆದ ಹೋರಾಟದ ಜೊತೆ ಜೊತೆಗೇ ಭಾರತದಲ್ಲಿ ಮಹಿಳಾ ಚಳವಳಿಯ ನೆಲೆಗಳು ಬೇರೂರತೊಡಗಿದ್ದವು. ಅಂತಾರಾಷ್ಟ್ರೀಯ ಮಹಿಳಾ ವರ್ಷದ ಘೋಷಣೆಯೂ ಆಗಿತ್ತು. ಮಹಿಳಾ ಚಳವಳಿಯನ್ನು ವಿಭಿನ್ನ ದೃಷ್ಟಿಕೋನ ಹಾಗೂ ವಿಭಿನ್ನ ಆರ್ಥಿಕ ನೆಲೆಯಲ್ಲಿ ಅರ್ಥೈಸುತ್ತಾ ವಿಭಿನ್ನ ವಿಚಾರಧಾರೆಯುಳ್ಳ ಮಹಿಳಾ ಸಂಘಟನೆಗಳು ರೂಪು ತಳೆಯತೊಡಗಿದವು. ರಾಜಕೀಯ ಪಕ್ಷಗಳ ಮಹಿಳಾ ಘಟಕಗಳು, ಸ್ವಾಯತ್ತ ಮಹಿಳಾ ಸಂಘಟನೆಗಳು, ಉದಾರವಾದಿ ನಿಲುವಿನ ಮಹಿಳಾ ಸಮಾಜಗಳು, ವಿದೇಶೀ ನೆರವನ್ನು ಪಡೆಯತ್ತಿದ್ದ ಸ್ವಯಂ ಸೇವಾ ಸಂಸ್ಥೆಗಳು ಇವುಗಳಲ್ಲಿ ಪ್ರಮುಖವಾದವುಗಳು. ರಾಜಕೀಯ ಪಕ್ಷಗಳ ಮಹಿಳಾ ಘಟಕಗಳು, ವಿಶೇಷವಾಗಿ ಎಡಪಕ್ಷಗಳ ಘಟಕಗಳು ಮಹಿಳಾ ಸಮಸ್ಯೆಗಳ ಪರಿಹಾರಕ್ಕೆ ಪ್ರತ್ಯೇಕವಾದ ಹೋರಾಟದ ಅಗತ್ಯವಿಲ್ಲವೆಂದು ಪ್ರತಿಪಾದಿಸುತ್ತಿದ್ದವು. ಕಾರ್ಮಿಕ ಹೋರಾಟವೇ ಅವರ ಕೇಂದ್ರ ಬಿಂದು. ಸಮಾಜವಾದಿ ಸಮಾಜ ನಿರ್ಮಾಣವಾದ ನಂತರ ನವಸಮಾಜದಲ್ಲಿ ಮಹಿಳೆಯರಿಗೆ ಸ್ವಾತಂತ್ರ್ಯ, ಸಮಾನತೆ ಸಿಗುತ್ತದೆ ಎಂಬುದು ಅವರ ಅಂದಿನ ನಂಬಿಕೆಯಾಗಿತ್ತು. ಇದು ಪುರುಷಪ್ರಧಾನ ಸಂಸ್ಕೃತಿಯನ್ನು ಬಿಂಬಿಸುವಂತಹ ನಂಬಿಕೆಯೇ ಆಗಿತ್ತು. (ಕ್ರಮೇಣ ಅವರ ನಿಲುವುಗಳಲ್ಲಿಯೂ ಬದಲಾವಣೆಯಾಯಿತು.)

ಇಂತಹ ಸಂದರ್ಭದಲ್ಲಿ ದೆಹಲಿ, ಕರ್ನಾಟಕ, ಹೈದರಾಬಾದ್ ಸೇರಿದಂತೆ ಹಲವಾರು ಕಡೆ ಅತ್ಯಾಚಾರ, ವರದಕ್ಷಿಣೆ ಸಾವು, ಮುಂತಾದ ಸಮಸ್ಯೆಗಳನ್ನು ನಿರ್ದಿಷ್ಟ ಘಟನೆಗಳ ಮೂಲಕ ರಾಷ್ಟ್ರದ ಗಮನ ಸೆಳೆಯುವ ರೀತಿಯಲ್ಲಿ ಹೋರಾಟಗಳನ್ನು ನಡೆಸಲಾಯಿತು. ನೂರು ವರ್ಷಗಳಿಂದ ಜಾರಿಯಲ್ಲಿದ್ದ ಅತ್ಯಾಚಾರಕ್ಕೆ ಸಂಬಂಧಪಟ್ಟ ಕಾನೂನಿನಲ್ಲಿ ಮೂಲಭೂತ ಬದಲಾವಣೆ ತರಬೇಕೆಂದು ಕೆಲವು ಮಹಿಳೆಯರು ಉಚ್ಚನ್ಯಾಯಾಲಯಕ್ಕೆ ಪತ್ರ ಬರೆದು ಒತ್ತಾಯಿಸಿದುದರ ಪರಿಣಾಮವಾಗಿ ಮಹಿಳಾ ಚಳವಳಿಗೆ ವಿಧ್ಯುಕ್ತವಾದ ಚಾಲನೆ ದೊರಕಿತು.

**'ವೈಯಕ್ತಿಕ ಎನ್ನುವುದು ರಾಜಕೀಯವಾದದ್ದು'** ಎಂಬ ಘೋಷಣೆಯೊಂದಿಗೆ ಮಹಿಳೆಯರ ಖಾಸಗಿ ಸಮಸ್ಯೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆಯ ಸಂಕೀರ್ಣತೆ ತಳಕು ಹಾಕಿಕೊಂಡಿರುವುದನ್ನು ಗುರುತಿಸಲಾಯಿತು. ನಾಲ್ಕು ಗೋಡೆಯೊಳಗೇ ಸೀಮಿತವಾಗಿದ್ದ ಮಹಿಳೆಯರ ಬದುಕಿನ ಸಮಸ್ಯೆಗಳನ್ನು ಸಾರ್ವಜನಿಕ, ಸರ್ಕಾರ, ಪ್ರಭುತ್ವದ ಚರ್ಚೆಗೆ ಒಡ್ಡಿ ಮಹಿಳೆಯ ಬಗೆಗಿನ ದೃಷ್ಟಿಕೋನದಲ್ಲಿ ಸ್ವಲ್ಪಮಟ್ಟಿಗಾದರೂ ರೂಪಾಂತರವಾಗುವುದಕ್ಕೆ ಚಳವಳಿಗಳು ಕಾರಣವಾದವು. ಇದೇ ಸಂದರ್ಭದಲ್ಲಿ ಸ್ವಾಯತ್ತ ಮಹಿಳಾ ಸಂಘಟನೆಗಳು ಸ್ವಾಯತ್ತ ಪರಿಕಲ್ಪನೆಯನ್ನು ತಾತ್ತ್ವಿಕವಾಗಿ ಹುಟ್ಟುಹಾಕುವುದರ ಜೊತೆಗೆ ಇದನ್ನು ಕ್ರಿಯಾತ್ಮಕವಾಗಿ ಬಲಗೊಳಿಸಿದವು. ಪಿತೃಪ್ರಧಾನತೆಯಿಂದ, ಸರ್ಕಾರದಿಂದ, ವಿದೇಶಿ ನೆರವಿನಿಂದ ಹೊರತಾದ ಸ್ವಾಯತ್ತತೆಯನ್ನು ಬಲವಾಗಿ ನಂಬಿದ ಮಹಿಳಾ ಸಂಘಟನೆಗಳು ಮಹಿಳೆಯರೇ ನಿರ್ಧಾರ ತೆಗೆದುಕೊಳ್ಳುವ ಅವಕಾಶದ ನಿರ್ಮಾಣಕ್ಕೆ ಒತ್ತಾಯಿಸತೊಡಗಿದವು. ಕುಟುಂಬದಲ್ಲಿನ ಪುರುಷಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವುದರ ಜೊತೆಗೆ ರಾಜಕೀಯ ಪಕ್ಷಗಳ ಶ್ರೇಣೀಕೃತ ವ್ಯವಸ್ಥೆಯನ್ನು ಕಟುವಾಗಿ ಟೀಕಿಸಿದ ಮಹಿಳಾ ಸಂಘಟನೆಗಳು ಸಾಂಘಿಕ ನಾಯಕತ್ವದ ಮಹತ್ವವನ್ನು ಎತ್ತಿ ಹಿಡಿದವು.

ಮಹಿಳಾ ಸಂಘಟನೆಗಳು ಒತ್ತು ನೀಡುತ್ತಿದ್ದ ಸ್ವಾಯತ್ತ ಪರಿಕಲ್ಪನೆ, ಸಾಂಘಿಕ ನಾಯಕತ್ವ, ಪ್ರತ್ಯೇಕ ಮಹಿಳಾ ಹೋರಾಟ ಮುಂತಾದ ದೃಷ್ಟಿಕೋನಗಳು ಬಹಳಷ್ಟು ಟೀಕೆಗೆ ಗುರಿಯಾಗಿದ್ದವು. ಮಹಿಳಾ ಸಂಘಟನೆಗಳು ಕುಟುಂಬವನ್ನು ಒಡೆಯುತ್ತವೆಯೆಂದು, ಹಾಗಾಗಿ ಕುಟುಂಬ ದುರ್ಬಲವಾಗುತ್ತವೆಯೆಂದು ಆರೋಪಿಸಲಾಗುತ್ತಿತ್ತು. ಪುರುಷ ಹಾಗೂ ಮಹಿಳೆಯರನ್ನು ಪ್ರತ್ಯೇಕಿಸುವ ಮೂಲಕ ಕಾರ್ಮಿಕ ಚಳವಳಿಗಳನ್ನು ಒಡೆಯುತ್ತವೆಯೆಂದೂ ಟೀಕಿಸಲಾಗುತ್ತಿತ್ತು. ಅರಾಜಕರೆಂದು ವಿದೇಶಿ ನೆರವಿನ ಸಂಸ್ಥೆಗಳು ಮೂದಲಿಕೆಗೆ ಒಳಗಾಗಿದ್ದವು. ಆದಾಗ್ಯೂ ಎರಡು ದಶಕಗಳ ಕಾಲ ಮಹಿಳಾ ಚಳವಳಿ ತೀವ್ರವಾಗಿ ಬೀದಿಗಿಳಿದು ಹೋರಾಡಿದುದರ




ಒಳಗಿನ ಪುಟಗಳಲ್ಲಿ....



ಫಲವಾಗಿ ಕಾನೂನುಗಳಲ್ಲಿ ಸುಧಾರಣೆಗಳಾದವು ಮಹಿಳೆಯರು ವೈಯಕ್ತಿಕವಾದುದನ್ನು ಸಾರ್ವಜನಿಕ ವಲಯದಲ್ಲಿ ಧ್ವನಿಎತ್ತಿ ಮಾತನಾಡುವಂತಾಯಿತು. ಕೌಟುಂಬಿಕ, ಸಾಮಾಜಿಕ ಹಿಂಸೆಯ ವಿರುದ್ಧ ಘನತೆಯಿಂದ ಮಾತನಾಡುವ ಭರವಸೆ ಮಹಿಳೆಯರಲ್ಲಿ ಮೂಡತೊಡಗಿತು.

ಮಹಿಳಾ ಚಳವಳಿಯ ತಾತ್ತ್ವಿಕತೆ ಹಾಗೂ ಸಿದ್ಧಾಂತದ ಆಧಾರದ ಮೇಲೆಯೇ 'ಮಾನಸ ವೇದಿಕೆ' ಹಾಗೂ 'ಮಾನಸ ಪತ್ರಿಕೆ'ಯನ್ನು ಪ್ರಾರಂಭಿಸಬೇಕೆಂದು ತೀರ್ಮಾನಿಸಿದೆವು. ಮಾನಸದ ಹಲವು ಸದಸ್ಯರ ವೈಯಕ್ತಿಕ ಬದುಕು, ಉದ್ಯೋಗದ ಪ್ರಶ್ನೆ ಹಾಗೂ ಕುಟುಂಬ ಜೀವನ ಈ ನಂಬಿಕೆಯ ಮೇಲೆ ಅವಲಂಬಿತವಾಗಿತ್ತೆಂದರೆ ಅತಿಶಯೋಕ್ತಿಯೇನಲ್ಲ. ಪ್ರಾರಂಭದಲ್ಲಿ ಸಾವಿತ್ರಿ, ರಾಜೇಶ್ವರಿ ಹಾಗೂ ಸಿ.ಜಿ. ಮಂಜುಳ ಕೆಲವು ಸಂಚಿಕೆಗಳನ್ನು ರೂಪಿಸಿ ಅದಕ್ಕೆ ಚಾಲನೆ ನೀಡಿದರು. ಪ್ರಾರಂಭದಲ್ಲಿ 'ಮಾನಸಿ' ಎಂದು ಕರೆದೆವು. ನೋಂದಣಿ ಸಿಗಲಿಲ್ಲವಾದ್ದರಿಂದ 'ಮಾನಸ' ಆಯಿತು. ಆ ದಿನಗಳಲ್ಲೂ ಮಹಿಳೆಯರಿಗೆ ಧ್ವನಿಯಾಗುವ, ಮಹಿಳಾ ಚಳವಳಿಯ ಮುಖವಾಣಿಯಾಗುವ ನಮ್ಮ ಪ್ರಯತ್ನಕ್ಕೆ ಬೆಂಬಲ ನೀಡಿ, ಪ್ರೋತ್ಸಾಹ ನೀಡಿದವರು ಇಳಾ ವಿಜಯಾರವರು. ಕೆಲವು ಸಂಚಿಕೆಗಳನ್ನು ಪ್ರಕಟಿಸಿದ ನಂತರ ನಾವೇ ಏಕೆ ಒಂದು ಮುದ್ರಣದ ಯುನಿಟ್ ಪ್ರಾರಂಭಿಸಬಾರದೆಂದು ಆಲೋಚಿಸಿ ಈ ಉದ್ದೇಶಕ್ಕಾಗಿ ಹಲವರಿಂದ ಹಣ ಸಂಗ್ರಹಿಸಿದೆವು. ಹಿಂಸೆ ತಾಳದೆಯೋ, ಅವರೇ ಹೊರಗೆ ಕಳಿಸಿಯೋ ನೆಲೆತಪ್ಪಿ ಬಂದ ಕೆಲವರಿಗೆ ಆಶ್ರಯ, ಉದ್ಯೋಗ ಕಲ್ಪಿಸುವುದು ಇದರ ಹಿಂದೆ ಇದ್ದ ಉದ್ದೇಶ. ಕಾಡುಗೋಡಿಯಲ್ಲಿ ಒಂದು ಪುಟ್ಟ ಕೊಠಡಿಯನ್ನು ಬಾಡಿಗೆ ಹಿಡಿದು ಇಳಾ ಮುದ್ರಣದ ಗುರುಮೂರ್ತಿಯವರ ನೆರವಿನಿಂದ ಮುದ್ರಣ ಅಚ್ಚು ಮೊಳೆಯ ಒಂದು ಯುನಿಟ್‌ಅನ್ನು ಪ್ರಾರಂಭಿಸಿಯೇಬಿಟ್ಟೆವು. ಈ ಹಂತದಲ್ಲಿ ಮಾನಸಕ್ಕೆ ನೆರವಾದದ್ದು ಗೀತ ಹಾಗೂ ವೇದ. ಕಾಡುಗೋಡಿಯ ಗೀತ ಅಚ್ಚು ಮೊಳೆಯನ್ನು ಜೋಡಿಸುವುದನ್ನು ಕಲಿತು, ಕರಡು ತಿದ್ದಿ, ತೂಕದ ಪ್ಲೇಟನ್ನು ಹತ್ತಿರವಿದ್ದ ಮುದ್ರಣಾಲಯಕ್ಕೆ ತೆಗೆದುಕೊಂಡು ಹೋಗಿ ಕೊಡುತ್ತಿದ್ದರು. ಈ ಸಂದರ್ಭದಲ್ಲಿ ಮುದ್ರಣಕ್ಕೆ ಬೇಕಾದ ನ್ಯೂಸ್‌ಪ್ರಿಂಟ್ ಕೊರತೆ ಇದ್ದುದರಿಂದ ಪೇಪರ್‌ಅನ್ನು ಸುಲ್ತಾನ್‌ಪೇಟೆಯಿಂದ ತರುವುದು ಅನಿವಾರ್ಯವಾಗಿತ್ತು. ಸುಲ್ತಾನ್‌ಪೇಟೆಯಲ್ಲೂ ಕೆಲವರ ಬಳಿ ಮಾತ್ರ ಇರುತ್ತಿದ್ದ (ಮಾರ್ವಾಡಿಗಳು) ನ್ಯೂಸ್‌ಪ್ರಿಂಟ್‌ಅನ್ನು ರೈಲ್ವೇಸ್ಟೇಷನ್‌ಗೆ ತಂದು ಕಾಡುಗೋಡಿಯ ಸ್ಟೇಷನ್‌ನಲ್ಲಿ ಇಳಿದು ಒಂದು ಕಡೆ ಬ್ಯಾಗು, ಇನ್ನೊಂದು ಕೈಯಲ್ಲಿ ಪೇಪರ್ ಹಿಡಿದು ತರುವುದು ಕಷ್ಟವಾದಾಗ ತಲೆಯ ಮೇಲೆ ಪೇಪರ್ ಹೊತ್ತು ತಂದದ್ದಿದೆ. ಇಂತಹ ಕಷ್ಟಕರ ಸನ್ನಿವೇಶದಲ್ಲಿ 'ಸುದ್ದಿ ಸಂಗಾತಿ' ವಾರಪತ್ರಿಕೆಯವರು ಕೆಲವು ಸಂಚಿಕೆಗಳಿಗೆ ನ್ಯೂಸ್‌ಪ್ರಿಂಟ್ ನೆರವು ನೀಡಿದರು. ಮುದ್ರಣದ ನಂತರ ಬಿಡಿ ಹಾಳೆಗಳನ್ನು ಜೋಡಿಸಿ, ಪಿನ್‌ಮಾಡಿ, ಮೈದಾಹಿಟ್ಟಿನ ಅಂಟನ್ನು ಹಚ್ಚಿ, ವಿಳಾಸಗಳನ್ನು ಬರೆದು ಅಂಚೆ ಕಛೇರಿಗೆ ತೆಗೆದುಕೊಂಡು ಹೋಗುತ್ತಿದ್ದ ಅನುಭವ ಇನ್ನೂ ಕಣ್ಣು ಮುಂದೆ ಇದ್ದಂತಿದೆ. ಈ ಹಂತದಲ್ಲಿ ಹಸೀನಾ ಎಂಬ ಬರಹಗಾರ್ತಿ ಮಾನಸದ ಸಂಪರ್ಕದಲ್ಲಿ ಇದ್ದಳು. ಆಕೆಯ ಮನೆಯಲ್ಲಿ ಸಮಸ್ಯೆಯಿದ್ದು, ಕೆಲವು ಕಾಲ ಮಾನಸ ಕೊಠಡಿಯಲ್ಲಿ ಇದ್ದು ಮಾನಸ ಕೆಲಸ ಮಾಡುತ್ತಿದ್ದಳು. ಹಾಗೆಯೇ ಮಾನಸದ ಪುಟ್ಟ ಕಛೇರಿಯ ಪಕ್ಕದಲ್ಲಿ ವಾಸವಾಗಿದ್ದ ಶಾಹಿನ್ ಮಾನಸದ ಮೊಳೆ ಜೋಡಿಸುವ ಕೆಲಸ ಮಾಡುತ್ತಿದ್ದಳು. ಅಲ್ಲಿ ಒಟ್ಟಿಗೆ ಸೇರಿದಾಗ ಎಲ್ಲರೂ ಕೆಲಸವನ್ನು ಮಾಡುತ್ತಿದ್ದೆವು. ಈ ಅನುಭವ ಹೊಸ ಒಳನೋಟವನ್ನು ನೀಡುವುದರ ಜೊತೆಗೆ ಶ್ರಮ ಸಂಸ್ಕೃತಿಯ ಅರ್ಥ ವ್ಯಾಪ್ತಿಯನ್ನು ಹೆಚ್ಚಿಸಿತು. ಮಹಿಳೆಯರಾಗಿ ಮನೆಗೆಲಸದ ಹೊರೆ ಹೊರುವ ನಮಗೆ ದೈಹಿಕ ಆಧಾರಿತ ಕೆಲಸ, ಕೂಲಿಕಾರ್ಮಿಕರ, ಪೌರಕಾರ್ಮಿಕರ ಶ್ರಮದ ಘನತೆಯನ್ನು ಎತ್ತಿ ಹಿಡಿಯಲು ಹಾಗೂ ಸಾಮಾಜಿಕ ವ್ಯತ್ಯಾಸದ ಗೆರೆಯನ್ನು ಅಳಿಸಲು ನಮ್ಮ ಸಾಂಘಿಕ ಪ್ರಯತ್ನದ ಕಲ್ಪನೆ ಪೂರಕವಾಯಿತು.

ಮುದ್ರಣದ ಸಮಸ್ಯೆ ಎದುರಾದಾಗ ನಾವು ಮೊಳೆ ಜೋಡಿಸಿ ಸಿದ್ಧಪಡಿಸಿದ 'ಚೆಸ್'ಗಳನ್ನು ತಮ್ಮ ಮೋಟರ್‌ಬೈಕ್‌ನಲ್ಲೇ ಇಟ್ಟುಕೊಂಡು ಹೋಗಿ ಮುದ್ರಿಸಿದ ಇಳಾಮುದ್ರಣದ ಗುರು ಅವರನ್ನು ಮಾನಸ ಸ್ಮರಿಸುತ್ತದೆ. ಮುದ್ರಣಾಲಯದ ಓಡಾಟ ಕಡಿಮೆ ಮಾಡಲು ಮನೆಯ ಸಮೀಪದ ಮುದ್ರಣಾಲಯದಲ್ಲಿ ಕೆಲಸ ಮಾಡಿಸಿದರು ಗೀತಾ, ಸವಿತಾ. ಅವರೀಗ ಉದ್ಯೋಗದಲ್ಲಿಯ ವರ್ಗಾವಣೆಯ ಕಾರಣ ಹೊರ ಊರಿನಲ್ಲಿದ್ದಾರೆ. ಮತ್ತೆ ಇಳಾ ನೆರವಿಗೆ ಬಂದಿದೆ.

ನಂತರದಲ್ಲಿ ಹೆಚ್ಚು ಹೆಚ್ಚು ಆಸಕ್ತಿಯುಳ್ಳ ಮಹಿಳೆಯರು ಮಾನಸದಲ್ಲಿ ಸಕ್ರಿಯವಾಗಿ ಭಾಗವಹಿಸತೊಡಗಿದರು. ಇದರಲ್ಲಿ ಮುಖ್ಯವಾಗಿ ದು.ಸರಸ್ವತಿ, ಸವಿತ, ಗಾಯತ್ರಿ ವಿ., ಗೀತ, ನೀಲಾಂಜನ, ಪುಷ್ಪ, ವತ್ಸಲ, ವೇದ, ವನಜ, ಶ್ಯಾಮಲ, ತಸ್ನೀಂ, ಚಂಪ, ರಾಜೇಶ್ವರಿ, ಶಾರದ ಮುಂತಾದವರು. ಮಾನಸದ ಸಭೆಯನ್ನು ವಾರಕ್ಕೊಮ್ಮೆ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಸತೊಡಗಿದೆವು. ಸದಸ್ಯರೆಲ್ಲರೂ ಮಾನಸಕ್ಕೆ ಆಯಾ ಸಂದರ್ಭದಲ್ಲಿ ನೀಡಿದ ಕೊಡುಗೆ ಮಹತ್ವವಾದುದು. ಮಾನಸದ ಸಭೆಗಳಲ್ಲಿ ಸಂಚಿಕೆಯ ರೂಪುರೇಖೆ, ಸಂಪಾದಕೀಯ, ಲೇಖನಗಳಲ್ಲಿನ ಧೋರಣೆಗಳನ್ನು ವಿವರವಾಗಿ ಚರ್ಚಿಸಲಾಗುತ್ತಿತ್ತು. ಗಾಯತ್ರಿ, ನೀಲಾಂಜನ, ದು. ಸರಸ್ವತಿಯಂಥ ಸದಸ್ಯರು ಪತ್ರಿಕೆಯ ತಾತ್ತ್ವಿಕ ಧೋರಣೆ, ಸಿದ್ಧಾಂತವನ್ನು ರೂಪಿಸಲು ಮಹತ್ವವಾದ ಕಾಣಿಕೆಯನ್ನು ನೀಡಿದ್ದರೆ, ಸವಿತಾ, ಗೀತಾರಂಥ




ಸದಸ್ಯರು ಕರಾರುವಾಕ್ಕಾದ ನಿಲುವುಗಳನ್ನು ತೆಗೆದುಕೊಳ್ಳಲು ನೆರವಾಗುತ್ತಿದ್ದರು. ಕೆಲವರು ಮೌನವಾಗಿಯೇ ನಮ್ಮ ಜೊತೆಗಿದ್ದು ನಮಗೆ ವರ್ಷಾನುಗಟ್ಟಲೆ ಬೆಂಬಲ ನೀಡಿದ ಅನುಭವ ಕೂಡಾ ನಮಗಿದೆ.

ಮಾನಸ ವೇದಿಕೆ ಹಾಗೂ ಪತ್ರಿಕೆಯ ಕೆಲಸಗಳಲ್ಲಿ ನಮ್ಮ ಶ್ರೇಣೀಕೃತ ವ್ಯವಸ್ಥೆಯನ್ನು ಮುರಿಯುವ ಕಿರುಪ್ರಯತ್ನವನ್ನು ಮಾಡುತ್ತಲೇ ಬಂದಿದ್ದೇವೆ. ವ್ಯಕ್ತಿಗತ ಧೋರಣೆಯನ್ನು ಪ್ರಶ್ನಿಸಿದ್ದೇವೆ. ಸಾಂಘಿಕವಾಗಿ ಕೆಲಸ ಮಾಡುತ್ತಾ ಸಾಂಘಿಕ ಆಲೋಚನೆಯನ್ನು ನಮ್ಮ ನಡುವೆ ಹುಟ್ಟು ಹಾಕುತ್ತಾ ಬಂದಿದ್ದೇವೆ. ಹಾಗಾಗಿ ಮಾನಸಕ್ಕೆ ಸಂಪಾದಕರು ಕೇವಲ ತಾಂತ್ರಿಕ ಕಾರಣಕ್ಕೆ ಮಾತ್ರ. ಪತ್ರಿಕೆಯ ಸಂಪೂರ್ಣ ಜವಾಬ್ದಾರಿ 'ಮಾನಸ ಬಳಗ'ದ್ದೇ ಆಗಿತ್ತು. ಸಂಪಾದಕೀಯ ಮಂಡಳಿಯ ಎಲ್ಲಾ ಸದಸ್ಯರೊಟ್ಟಿಗೆ ಲೇಖನ ಹಾಗೂ ಸಂಪಾದಕೀಯಗಳನ್ನು ಚರ್ಚಿಸಿ ತೀರ್ಮಾನಿಸಲಾಗುತ್ತಿತ್ತು. ಹಾಗಾಗಿ ಸಂಪಾದಕೀಯದಲ್ಲಿ ಹೆಸರು ಹಾಕುವುದು, ಒಬ್ಬರ ಹೆಸರು, ಒಬ್ಬರ ನಾಯಕತ್ವಕ್ಕೆ ಪ್ರಾಮುಖ್ಯ ನೀಡುವುದನ್ನು ಪ್ರಜ್ಞಾಪೂರ್ವಕವಾಗಿ ಕೈಬಿಡಲಾಯಿತು. ಲೇಖನ ಬರೆಯುವುದು, ಬೇರೆಯವರಿಂದ ಲೇಖನ ಬರೆಸುವುದು, ಜೊತೆ ಜೊತೆಯಲ್ಲಿಯೇ ಚಂದಾ ಸಂಗ್ರಹಿಸುವುದು, ವಿಳಾಸಗಳನ್ನು ಬರೆಯುವುದು, ವಿಳಾಸಗಳಲ್ಲಿನ ಬದಲಾವಣೆಯನ್ನು ಸರಿಪಡಿಸುವುದು ಮುಂತಾದ ತಾಂತ್ರಿಕ ಕೆಲಸಗಳನ್ನು ಸಮಾನ ನೆಲೆಯಲ್ಲಿ ಹಂಚಿಕೊಳ್ಳುವ ಪ್ರಯತ್ನವನ್ನು ಮಾಡುತ್ತಲೇ ಬಂದಿದ್ದೇವೆ.




1985-86ರಿಂದ ಮಾನಸ ಪ್ರಾರಂಭವಾದಾಗಿನಿಂದಲೂ ಸರ್ಕಾರಿ, ವಿದೇಶೀ ಅಥವಾ ಇನ್ನಾವುದೇ ಏಜೆನ್ಸಿಯಿಂದ ಹಣದ ನೆರವು ಪಡೆಯಬಾರದು ಎನ್ನುವ ನಿಲುವನ್ನೇ ನಾವು ಉಳಿಸಿಕೊಂಡು ಬಂದಿದ್ದೇವೆ. ಚಳವಳಿಯ ಭಾಗವಾಗಿರುವ ಪತ್ರಿಕೆ ಯಾರ ಹಂಗಿಗೂ ಒಳಗಾಗದೇ ಸ್ವಾಯತ್ತತೆ ಉಳಿಸಿಕೊಳ್ಳಬೇಕು ಎನ್ನುವ ಅಪೇಕ್ಷೆ ಒಂದು ಕಡೆಯಾದರೆ, ಮಾನಸಕ್ಕಾಗಿ ಎತ್ತುವ ಹಣದ ಸಂಗ್ರಹಣೆಯೇ ಇಡಿಯ ಸಮುದಾಯದ ಜೊತೆ ನಿರಂತರವಾಗಿ ನಡೆಯುವ ಒಂದು ಸಂವಾದದ ರೀತಿಯ ಚಟುವಟಿಕೆಯಾಗಬೇಕೆಂಬುದು ನಮ್ಮ ತಾತ್ವಿಕ ದೃಷ್ಟಿಕೋನವಾಗಿತ್ತು. ಈ ರೀತಿಯ ಹಣ ಸಂಗ್ರಹಣೆಯ ಕಾರ್ಯವೇ ಒಂದು ರಾಜಕೀಯ ಚಟುವಟಿಕೆಯಾಗಿಬಿಡುತ್ತದೆ. ಗಾಂಧೀಜಿಯವರು ಸಂಘಟನೆ ಹಾಗೂ ಚಳವಳಿಯ ಹಂತದಲ್ಲಿ ಯಾವಾಗಲೂ ಈ ಮಾತನ್ನು ಹೇಳುತ್ತಿದ್ದರು. ಒಂದು ಸಂಘಟನೆಯಲ್ಲಿ ಒಂದು ಲಕ್ಷ ಹಣ ಇಟ್ಟುಕೊಂಡು ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುವುದಲ್ಲ, ಒಬ್ಬೊಬ್ಬರ ಹತ್ತಿರವೇ ಚಿಕ್ಕ ಚಿಕ್ಕ ಹಂತದಲ್ಲಿ ಹಣ ಸಂಗ್ರಹಣೆ ಮಾಡುವುದು, ಅವರಿಗೆ ಇಂತಹ ಚಟುವಟಿಕೆಗಳ ಬಗ್ಗೆ ಬಿಡಿಸಿ, ಬಿಡಿಸಿ ಹೇಳುವುದು ಇಂತಹ ಕ್ರಿಯೆಗಳಿಂದಾಗಿ ಹಣ ಸಂಗ್ರಹಣೆಯೇ ಒಂದು ರಾಜಕೀಯ ಚಟುವಟಿಕೆಯಾಗಿಬಿಡುತ್ತದೆ ಎಂಬ ನಂಬಿಕೆಯಿಂದಲೇ ನಾವು ಇಲ್ಲಿಯವರೆಗೆ ಪತ್ರಿಕೆ ನಡೆಸಿಕೊಂಡು ಬಂದಿದ್ದೇವೆ.




ಮಾನಸ ಪ್ರಕಟಣೆಯ ನಮ್ಮ ಪ್ರಯತ್ನದಲ್ಲಿ ನಾವು ಯಾವುದೇ ನಿರ್ದಿಷ್ಟ ಯಶಸ್ಸನ್ನು ಕೇಂದ್ರವಾಗಿಟ್ಟುಕೊಂಡಿರಲಿಲ್ಲ. ಮಾನಸ ತುಳಿಯುತ್ತಿರುವ ಹಾದಿ-ಗುರಿಯೇ ಮುಖ್ಯವಾದುದೆಂದು ನಮ್ಮೆಲ್ಲರ ಬಲವಾದ ಅನಿಸಿಕೆಯಾಗಿತ್ತು. ಪತ್ರಿಕೆಯ ಪ್ರಕಟಣೆಯೇ ಮಹಿಳಾ ಚಳವಳಿಯ ಹಾದಿಯಲ್ಲಿನ ಒಂದು ಹೆಜ್ಜೆ ಎಂದು ನಾವು ಭಾವಿಸಿದ್ದೆವು. ಮಧ್ಯಮ ವರ್ಗದವರೇ ಹೆಚ್ಚು ಹೆಚ್ಚು ಭಾಗವಹಿಸುತ್ತಾ ಬಂದಿರುವ ಮಹಿಳಾ ಸಂಘಟನೆಗಳು ಜನಪರವಾಗಿರುವ, ಸಾಮಾನ್ಯ ಮಹಿಳೆಗೆ ತಲುಪಬಹುದಾದಂತಹ ಒಂದು ಚಳವಳಿಯನ್ನು ಹುಟ್ಟುಹಾಕಿವೆಯೇ ಎಂಬ ಪ್ರಶ್ನೆಗೆ ಉತ್ತರ ನಿರಾಶಾದಾಯಕವೇ ಆಗಿರುತ್ತದೆ. ಭಾರತದ ಉದ್ದಗಲಕ್ಕೂ ಇರುವ ಮಹಿಳಾ ಸಂಘಟನೆಗಳು ಒಡೆದು ಛಿದ್ರ ಛಿದ್ರವಾಗಿವೆ. ಹಣಕಾಸಿನಿಂದ ಹಿಡಿದು ರಚನಾತ್ಮಕತೆಯವರೆಗೂ ಒಂದೊಂದು ಸಂಘಟನೆಯಲ್ಲೂ ವಿಭಿನ್ನವಾಗಿರತಕ್ಕಂತಹ ನಿಲುವುಗಳೇ ಕಂಡುಬರುತ್ತವೆ. ಹಾಗಾಗಿ ಪರಿಪೂರ್ಣ ಸ್ವಾಯತ್ತತೆ ಎನ್ನುವ ಕಲ್ಪನೆ ಮಹಿಳಾಚಳವಳಿಯಲ್ಲಿ ಧ್ವನಿಸುತ್ತಿಲ್ಲ. ಸ್ವಾಯತ್ತ ಸಂಘಟನೆಗಳ ಸಂಖ್ಯೆಯೂ ಬೆರಳೆಣಿಕೆಯಷ್ಟು ಮಾತ್ರ. ಇಂತಹ ಸಂದರ್ಭದಲ್ಲಿ ಮಾನಸದಂತಹ ಪತ್ರಿಕೆ ಮಹಿಳಾ ಚಳವಳಿಯ ತಾತ್ವಿಕತೆ, ಸ್ವಾಯತ್ತತೆ ಇತರ ಆಯಾಮಗಳ ಬಗ್ಗೆ ಓದುಗರಲ್ಲಿ ಒಂದು ಆಲೋಚನಾ ಕ್ರಮ ರೂಪಿಸುವಲ್ಲಿ ಇಲ್ಲಿಯವರೆಗೆ ಕ್ಯಾಟಲಿಸ್ಟ್ ಪಾತ್ರವನ್ನು ವಹಿಸುತ್ತಾ ಬಂದಿದೆ.




ಪತ್ರಿಕೆಯ ತಾತ್ವಿಕ ಬದ್ಧತೆಯನ್ನು ನಾವು ಪ್ರಾರಂಭದಿಂದಲೂ ಚರ್ಚಿಸುತ್ತಾ ಬಂದಿದ್ದೇವೆ. ಜಾತಿ, ವರ್ಗ, ಪಿತೃಪ್ರಧಾನತೆ, ಬಂಡವಾಳಶಾಹಿತ್ವ, ಲೈಂಗಿಕ ವಿಭಿನ್ನತೆ ಎಲ್ಲವೂ ಮಹಿಳೆಯರ ಸಮಸ್ಯೆಗಳ ಜೊತೆ ತಳಕು ಹಾಕಿಕೊಂಡಿರುವುದರಿಂದ ಈ ಎಲ್ಲಾ ಸಮಸ್ಯೆಗಳಿಗೂ ಒಟ್ಟಿಗೇ ಹೋರಾಡಬಲ್ಲ ವಿಧಾನಗಳತ್ತ ನಾವು ಗಮನ ಕೇಂದ್ರೀಕರಿಸಿ ಅಧ್ಯಯನ ನಡೆಸಬೇಕೆಂದು ಪ್ರಯತ್ನಿಸಿದ್ದೇವೆ. ಅಂತಹ ಲೇಖನಗಳನ್ನು ಪ್ರಕಟಿಸಬೇಕೆಂಬುದು ನಮ್ಮ ನಿಲುವಾಗಿತ್ತು. ಹಾಗಾಗಿ ನಮ್ಮ ಸುತ್ತ ಮುತ್ತಲಿರುವ ಅಸಂಘಟಿತ ಮಹಿಳೆಯರು, ಗಿರಿಜನರು, ಕೃಷಿ ಕಾರ್ಮಿಕ ಮಹಿಳೆಯರು, ಅಸಂಘಟಿತ ಕಾರ್ಮಿಕ ಮಹಿಳೆಯರ ಸಮಸ್ಯೆಗಳಿಗೆ ಆದ್ಯತೆ ನೀಡುವುದು, ದಿನಗೂಲಿ ಮಹಿಳೆಯರ ಅನುಭವಗಳತ್ತ ಬೆಳಕು ಚಲ್ಲುವುದು, ಇಮ್ಮಡಿ ದುಡಿತದ ಬಗ್ಗೆ ಲೇಖನಗಳನ್ನು ಪ್ರಕಟಿಸುವುದು ನಮ್ಮ ಉದ್ದೇಶವಾಗಿತ್ತು. ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆಯಂತಹ

**ಮಾಡಿಸಬೇಡಿ ಮನೆ ಚಾಕರಿ : ಹೆಣ್ಣಿಗಿರಲೊಂದು ನೌಕರಿ**













ವಿಚಾರಗಳಲ್ಲಿಯೂ ವರ್ಗ ಹಾಗೂ ಲಿಂಗಾಧರಿತ ಅಂಶಗಳು ಕೆಲಸ ಮಾಡುತ್ತವೆ ಎಂಬಂತಹ ಲೇಖನಗಳನ್ನು ಪ್ರಕಟಿಸುತ್ತಲೇ ಬಂದಿದ್ದೇವೆ. ಇವುಗಳು ನಮ್ಮ ಕೇಂದ್ರವಾಗಿದ್ದು ಇವುಗಳ ಸುತ್ತ ಲೇಖನ, ವರದಿ, ವಿಶ್ಲೇಷಣೆ, ವಿಮರ್ಶೆ, ಕವನ ಪ್ರಕಟಿಸಿದ್ದೇವೆ. ವಿವಾಹ, ಕುಟುಂಬ, ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ವೇತನ ರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗಳನ್ನು ಚರ್ಚೆಗೊಳಪಡಿಸಿದ್ದೇವೆ. ಆರೋಗ್ಯ, ಲೈಂಗಿಕತೆ, ಅಪಾಯಕಾರಿ ಗರ್ಭನಿರೋಧಕಗಳು, ಅಭಿವೃದ್ಧಿ ಯೋಜನೆಗಳ ಕುರಿತು ವಿಮರ್ಶಿಸಿದ್ದೇವೆ. ಅಣ್ವಸ್ತ್ರೀಕರಣ, ಮಿಲಟರೀಕರಣ, ಜಾಗತೀಕರಣದಂತಹ ಬೆಳವಣಿಗೆಯನ್ನು ಮಹಿಳಾ ದೃಷ್ಟಿಕೋನದಿಂದ ಪಶ್ನಿಸುತ್ತಾ ಬಂದಿದ್ದೇವೆ. ಇತರ ಪ್ರಜಾಸತ್ತಾತ್ಮಕ ಸಂಘಟನೆಗಳೊಂದಿಗೆ ಕೋಮುವಾದ, ಮೀಸಲಾತಿ, ಪೌರಕಾರ್ಮಿಕರ ಸಮಸ್ಯೆ, ಸಮಾನ ನಾಗರಿಕ ಸಂಹಿತೆ, ಲೈಂಗಿಕ ಅಲ್ಪಸಂಖ್ಯಾತರು, ಸ್ಥಳಾಂತರ, ಗಾರ್ಮೆಂಟ್ ಕಾರ್ಮಿಕರ ಹೋರಾಟ ಮುಂತಾದ ಎಲ್ಲ ಬಗೆಯ ಹೋರಾಟಗಳೊಂದಿಗೆ ಕೈ ಜೋಡಿಸುತ್ತಾ ಬಂದಿದ್ದೇವೆ. ಸ್ವ ಸಹಾಯ ಸಂಘಗಳನ್ನು ರಚಿಸುವುದರ ಮೂಲಕ ಮಹಿಳೆಯರ ಆರ್ಥಿಕ ಸಬಲತೆಗೆ ಪ್ರೋತ್ಸಾಹಿಸುತ್ತಾ ಬಂದಿದ್ದೇವೆ. ಪತ್ರಿಕೆ ಅನೇಕ ಮಹಿಳೆಯರನ್ನು ಹಾಗೂ ಪುರುಷರನ್ನು ಈ ದಿಕ್ಕಿನಲ್ಲಿ ಚಿಂತಿಸಿ ಬರೆಯಲು ಪ್ರೇರಿಸಿದೆ.

ಕೌಟುಂಬಿಕ ಹಿಂಸೆ, ದೌರ್ಜನ್ಯಗಳಿಗೊಳಗಾದ ಮಹಿಳೆಯರಿಗೆ ನೆರವು ನೀಡುವುದು ಹಾಗೂ ಪುಸ್ತಕ ಪ್ರಕಾಶನ ಹೀಗೆ 'ಮಾನಸ ವೇದಿಕೆ' ತನ್ನ ಚಟುವಟಿಕೆಗಳನ್ನು ವಿಸ್ತರಿಸುತ್ತಾ ಬಂದಿದೆ. ಕೌಟುಂಬಿಕ ಹಿಂಸೆ, ನಿರುದ್ಯೋಗ, ಆರ್ಥಿಕ ಸಮಸ್ಯೆ ಹಾಗೂ ಇತರ ಸಮಸ್ಯೆಗಳಿಗೆ ಮಾನಸ ಶಕ್ತಿ ಮೀರಿ ನೆರವು ನೀಡಿದೆ. ಆದರೆ ಮಾನಸದ ನೆರವು ಬಯಸಿ ಬಂದ ಇಂತಹ ಕೆಲವು ಮಹಿಳೆಯರು ತಮ್ಮ ಸಮಸ್ಯೆಗಳನ್ನು ಬಗೆ ಹರಿಸಿಕೊಳ್ಳುವ ಹಂತದಲ್ಲಿ ಮಾತ್ರ ಬಳಸಿಕೊಂಡದ್ದು ಅಥವಾ ಮಾನಸದ ಅನುಭವದ ಹಿನ್ನೆಲೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಉದ್ಯೋಗ ದೊರಕಿಸಿಕೊಳ್ಳುವ ಏಣಿಯನ್ನಾಗಿ ಮಾಡಿಕೊಂಡದ್ದೂ ಇದೆ. ಮಾನಸದಿಂದ ಪಡೆದುಕೊಳ್ಳುವುದಷ್ಟೇ ಅವರ ಗುರಿಯಾಗಿತ್ತೇ ವಿನಃ ಮಾನಸಕ್ಕೆ ಬೆಂಬಲ ನೀಡುವುದು ಕೆಲವರಿಗೆ ಮುಖ್ಯವಾಗಲೇ ಇಲ್ಲ ಎಂಬ ನೋವು ಕೂಡಾ ನಮಗಿದೆ.

ಕಳೆದ ಎರಡೂವರೆ ದಶಕದಲ್ಲಿ 'ಮಾನಸ ವೇದಿಕೆ' ಈ ಕೆಳಕಂಡ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ದುಡಿಯುವ ಸ್ಥಳದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಹಿಂಸೆ, ಕಿರುಕುಳವನ್ನು ಕುರಿತು ಮಾನಸ ಕರಪತ್ರವನ್ನು ಪ್ರಕಟಿಸಿ ಸಾರ್ವಜನಿಕ ಸ್ಥಳದಲ್ಲಿ ಹಂಚಿದೆ. ಕೌಟುಂಬಿಕ ಹಿಂಸೆಯನ್ನು ಕುರಿತು ವಿಚಾರ ಸಂಕಿರಣ, ಸೌಂದರ್ಯ ಸ್ಪರ್ಧೆ ವಿರುದ್ಧ ನಡೆದ ಪ್ರತಿಭಟನೆಯಲ್ಲಿ ಭಾಗವಹಿಸಿರುವುದು, ಸಮಾನ ನಾಗರೀಕ ಸಂಹಿತೆಯನ್ನು ಕುರಿತ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿರುವುದು, ಕುಪ್ಪಳಿಯಲ್ಲಿ ಲೇಖಕಿಯರು ಹಾಗೂ ದುಡಿಯುವ ಹಾಗೂ ಕಾರ್ಯಕರ್ತ ಮಹಿಳೆಯರ ನಡುವೆ ಮೂರು ದಿನದ ಸಂವಾದ ಕಾರ್ಯಕ್ರಮ ಏರ್ಪಡಿಸಿದುದು, ಪ್ರತಿವರ್ಷ ವಿಶೇಷ ಸಂಚಿಕೆಗಳನ್ನು ಪ್ರಕಟಿಸಿರುವುದು, ಅಮೇರಿಕ ಇರಾನ್ ಮೇಲೆ ನಡೆಸಿದ ದಾಳಿ ವಿರೋಧಿಸಿ ಇರಾನ್‌ಗೆ ಬೆಂಬಲ ನೀಡಲು ರಕ್ತದಾನ ಶಿಬಿರ ಏರ್ಪಡಿಸಿರುವುದು, ಕೋಮುವಾದಿ ವಿರುದ್ಧದ ಹೋರಾಟದಲ್ಲಿ ಇತರ ಸಂಘಟನೆಗಳೊಂದಿಗೆ ಕೈ ಜೋಡಿಸಿರುವುದು, ಹೆಚ್.ಐ.ವಿ. ಪೀಡಿತ ಮಹಿಳೆಯರೊಂದಿಗೆ ಸಂವಾದ ಕಾರ್ಯಕ್ರಮ ಇತ್ಯಾದಿ ಹಲವು ದಿಕ್ಕುಗಳಲ್ಲಿ ಶ್ರಮವಹಿಸಲಾಗಿದೆ.

ಪ್ರಚಾರ, ವೈಭವೀಕರಣ, ವೈಯಕ್ತಿಕ ಲಾಭ ಮುಂತಾದವುಗಳಿಂದ ಮಾನಸ ಯಾವಾಗಲೂ ದೂರವೇ. ಹಾಗಾಗಿ ಮಾನಸದ ಕಾರ್ಯಚಟುವಟಿಕೆ ಗುರುತಿಸಿ ಕೆಲವು ಸಂಸ್ಥೆಗಳು ಪ್ರಶಸ್ತಿ ನೀಡಲು ಮುಂದಾದಾಗ ಪ್ರಶಸ್ತಿ ನೀಡುವವರ ತಾತ್ತ್ವಿಕ ನಿಲುವಿನ ಬಗ್ಗೆ ವಿವರವಾಗಿ ಚರ್ಚಿಸಿ ತೀರ್ಮಾನ ತೆಗೆದುಕೊಂಡದ್ದಿದೆ. 'ಪಾಪ್ಯುಲೇಶನ್ ಫಸ್ಟ್' ನ ಮಾಧ್ಯಮ ಪ್ರಶಸ್ತಿಯನ್ನು ಆ ಸಂಸ್ಥೆಯ ಬಗ್ಗೆ ಇದ್ದ ಭಿನ್ನಾಭಿಪ್ರಾಯದಿಂದ ಗೌರವಯುತವಾಗಿ ಹಾಗೂ ವಿನಯದಿಂದ ನಿರಾಕರಿಸಿದೆವು. ಆದರೆ ಮೈಸೂರಿನ 'ಕವಿತಾ ಸ್ಮಾರಕ ಟ್ರಸ್ಟ್' (ಸಾಹಿತಿ ರಾಗೌ ಅವರು ಸ್ಥಾಪಿಸಿದ್ದು) ವತಿಯಿಂದ ನೀಡಿರುವ ಪ್ರಶಸ್ತಿಯನ್ನು ನಮ್ಮ ನಂಬಿಕೆಗೆ, ಸಿದ್ಧಾಂತಕ್ಕೆ ಪತ್ರಿಕೆಗೆ, ವೇದಿಕೆಯ ಚಟುವಟಿಕೆಗೆ ನೀಡಿದ ಅತ್ಯಂತ ಗೌರವಾನ್ವಿತ ಪ್ರಶಸ್ತಿಯೆಂದು ನಮ್ರತೆಯಿಂದ ಸ್ವೀಕರಿಸಿದ್ದೇವೆ. ಇದು ಮಾನಸ ಬಳಗಕ್ಕೆ ಸಂದ ವೈಯಕ್ತಿಕ ಗೌರವವಷ್ಟೇ ಅಲ್ಲ, ಬದುಕುವ ಹಕ್ಕಿಗಾಗಿ ಹೋರಾಡುತ್ತಿರುವ ಪ್ರತಿಯೊಬ್ಬ ಮಹಿಳೆಗೂ ಸಂದ ಗೌರವವೆಂದು ನಾವು ಭಾವಿಸಿದ್ದೇವೆ.

ನಾವು ಆಯ್ಕೆಮಾಡಿಕೊಂಡ ಹಾದಿ, ವೈಚಾರಿಕ ಸಿದ್ಧಾಂತಗಳು ಸುಂದರವಾಗಿ ಕಂಡರೂ ಅವುಗಳನ್ನು ಕೃತಿಯ ರೂಪದಲ್ಲಿರಿಸುವುದು ನಂಬಿಕೆಯಷ್ಟು ಸುಲಭವಲ್ಲ. ಸ್ವಾಯತ್ತ ಪರಿಕಲ್ಪನೆ ಹಾಗೂ ಸಾಂಘಿಕ ಪ್ರಯೋಗ ನಮ್ಮನ್ನು ಹತಾಶೆಯಿಂದ ಕೈಚೆಲ್ಲಿ ಕೂಡುವಂತೆ ಸಹ ಮಾಡಿದೆ. ಕಳೆದ 26 ವರ್ಷಗಳಿಂದ ಕೆಲಸ ಮಾಡಿದರೂ ಮಾನಸಕ್ಕೆ ಇಂದಿಗೂ ಒಂದು ಕಛೇರಿ ಇಲ್ಲ, ಟೆಲಿಫೋನ್ ಸೌಲಭ್ಯವಿಲ್ಲ, ಪೂರ್ಣಪ್ರಮಾಣದಲ್ಲಿ ಕೆಲಸ ಮಾಡುವ ಕಾರ್ಯಕರ್ತರಿಲ್ಲ. ಪತ್ರಿಕೆಯ ಹಾಗೂ ವೇದಿಕೆಯ ಚಟುವಟಿಕೆಗಳನ್ನು

**ವಿದ್ಯೆ ನೌಕರಿಗಾಗಿ ಅಲ್ಲ : ಅದು ಬೆಳಕು ಕೇಳಿ, ಸೊಲ್ಲ**













ಸಾರ್ವಜನಿಕ ಸ್ಥಳಗಳಲ್ಲಿ, ಮಾನಸದ ಸದಸ್ಯರ ಮನೆಗಳಲ್ಲಿ ನಡೆಸಿದ್ದೇವೆ. ಪ್ರತಿ ತಿಂಗಳೂ ನಮ್ಮ ವೇತನದಲ್ಲಿ ಮಾನಸಕ್ಕೆ ನಿರ್ದಿಷ್ಟ ಮೊತ್ತ ನೀಡಿದ್ದೇವೆ. ಕೆಲವೊಮ್ಮೆ ಸಾಲ ತಂದು ಪತ್ರಿಕೆಯನ್ನು ಪ್ರಕಟಿಸಿದ್ದೇವೆ. ಈ ಮಾತನ್ನು ಇಲ್ಲಿ ಹೇಳುವುದಕ್ಕೆ ಮುಖ್ಯ ಕಾರಣ, ಮಾನಸವನ್ನು ಸಾಂಸ್ಥೀಕರಣಗೊಳಿಸುವ ಎಲ್ಲ ಪ್ರಯತ್ನವನ್ನು ನಾವು ನಿರಾಕರಿಸುತ್ತಾ ಬಂದಿದ್ದೇವೆ ಎಂಬುದನ್ನು ಸ್ಪಷ್ಟಪಡಿಸಲು. ಯಾವುದೇ ಪ್ರಗತಿಪರ ಚಳವಳಿ ಸಾಂಸ್ಥೀಕರಣಗೊಂಡಾಗ ಅದರೊಳಗೆ ವ್ಯಕ್ತಿಗತ ಹಿತಾಸಕ್ತಿಗಳು ಅಥವಾ ಇತರ ಹಿತಾಸಕ್ತಿಗಳು ನುಸುಳಿಬಿಡುತ್ತವೆ. ನಾವು ನಮ್ಮ ಬದ್ಧತೆಗಳಿಗಾಗಿ ಹೋರಾಡುವುದನ್ನು ಮರೆತು, ಕೊನೆಗೆ ಇಂತಹ ಸ್ವಾರ್ಥ, ಹಿತಾಸಕ್ತಿಗಳ ವಿರುದ್ಧ ಹೋರಾಡುವುದೇ ಮುಖ್ಯವಾಗಿಬಿಡುತ್ತದೆ. ಇಂದು ಪ್ರಗತಿಪರ ಚಳವಳಿಗಳು, ರೈತ ಚಳವಳಿಗಳು ಹಾಗೂ ಮಹಿಳಾ ಚಳವಳಿಗಳು ಹರಿದು ಹಂಚಿ ಹೋಗುತ್ತಿವೆ. ಹಾಗಾಗಿ ಮಾನಸದ ಈ ವಿಚಾರಗಳನ್ನು ಹೇಳಬೇಕಾಗಿ ಬಂದಿದೆ. ನಮ್ಮ 26 ವರ್ಷಗಳ ಪಯಣ ಒಂದು ಹೋರಾಟದ ಹಾದಿಯೇ ಆಗಿದೆ. ಸಂಘರ್ಷ, ಕಹಿಭಾವನೆ, ಭಿನ್ನಾಭಿಪ್ರಾಯಗಳು ನಮ್ಮ ಜೊತೆ ಜೊತೆಗೇ ನಡೆದು ಬಂದಿವೆ. ನಮ್ಮ ಕನಸುಗಳನ್ನು ಸಾಕಾರಗೊಳಿಸಿ ಪತ್ರಿಕೆಯನ್ನು ಬೆಳೆಸಿದವರಿದ್ದಾರೆ; ಬಿಟ್ಟು ಹೋದವರಿದ್ದಾರೆ. ಹಲವರು ಸಕ್ರಿಯವಾಗಿಲ್ಲವಾದರೂ ನಮ್ಮೊಂದಿಗಿದ್ದಾರೆ, ಹೊಸಬರು ಸೇರಿದ್ದಾರೆ. ಹೆಚ್ಚು ಕೆಲಸ ಮಾಡಿದವರಿದ್ದಾರೆ; ಕಡಿಮೆ ಕೆಲಸ ಮಾಡಿದವರಿದ್ದಾರೆ. ಕೆಲವು ಸಂದರ್ಭದಲ್ಲಿ ತೀವ್ರವಾಗಿ ತೊಡಗಿದವರಿದ್ದಾರೆ; ಕೆಲವೊಮ್ಮೆ ಮಂದಗತಿಯಲ್ಲಿ ಜವಾಬ್ದಾರಿ ಹಂಚಿಕೊಂಡವರಿದ್ದಾರೆ.

ಇನ್ನು ಸಾಧ್ಯವಿಲ್ಲ ಎಂಬಂತಹ ಸನ್ನಿವೇಶದಲ್ಲಿ ಒತ್ತಾಸೆಯಾಗಿ, ಬೆನ್ನೆಲುಬಾಗಿ ಪತ್ರಿಕೆಯನ್ನು ಜೀವಂತವಾಗಿ ಇರಿಸಿದವರಿದ್ದಾರೆ. ನಾವಿದ್ದೇವೆ ಮುಂದುವರಿಸಿ ಎಂದು ಹುರಿದುಂಬಿಸಿದವರಿದ್ದಾರೆ. ಅಂಚೆ ಇಲಾಖೆಯ ನಿಯಮಾವಳಿಯ ಕಾರಣಕ್ಕಾಗಿ 'ನಮ್ಮ ಮಾನಸ'ವಾಗಿ ಮತ್ತೆ ಪ್ರಾರಂಭಿಸಿದಾಗ ಸಲಹೆ-ಸಹಕಾರದಲ್ಲಿ ಸೇರ್ಪಡೆಯಾದ ಡಾ. ಬಿ.ಎನ್. ಸುಮಿತ್ರಾಬಾಯಿ ಅವರ ಹೊಸ ನೋಟದ ಬರಹಗಳು, ವಿಮರ್ಶೆ, ಅನುವಾದಗಳು ಪತ್ರಿಕೆಯ ಗುಣವನ್ನು ಹೆಚ್ಚಿಸಿವೆ. ನಿಲ್ಲಿಸಬೇಕೆನ್ನುವ 2012ರ ಈ ಕ್ಷಣದಲ್ಲಿಯೂ ನೀವು ಕೆಲವರು ಉದಾರವಾಗಿ ನಿಮ್ಮ ಸಹಾಯ ಹಸ್ತವನ್ನು ಚಾಚಿದ್ದೀರಿ. ನಾವಿದ್ದೇವೆ ಎನ್ನುತ್ತಿದ್ದೀರಿ. ಹಲವಾರು ಸಲಹೆ ನೀಡಿ, ಸಹಕಾರ ನೀಡುತ್ತೇವೆ ಎನ್ನುತ್ತಿದ್ದೀರಿ. ಮಾನಸದೊಂದಿಗಿನ ನಿಮ್ಮಂತಹ ಸಹೃದಯ ಓದುಗರ ಸಂಬಂಧ ಅಂತರಂಗದಲ್ಲಿ ನಿರಂತರ ಹರಿಯುವ ನದಿಯಾಗಿದೆ. ಕಳೆದ ಸಂಚಿಕೆಯಲ್ಲಿ 'ನಮ್ಮ ಮಾನಸ' ಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸುವುದರ ಬಗ್ಗೆ ಕಾರಣಗಳನ್ನು ವಿವರವಾಗಿ ಬರೆದಿದ್ದೇವೆ. ನಮ್ಮ ಮಾನಸ ಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸಿದರೂ, 'ಮಾನಸ ವೇದಿಕೆ'ಯ ಚಟುವಟಿಕೆಯನ್ನು ಮುಂದುವರಿಸುವ ಹಾಗೂ ಮಹಿಳಾಪರ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಗಳನ್ನು ಮಾನಸ ವೇದಿಕೆ ಹೊಂದಿದೆ.

ಕಳೆದ 26 ವರ್ಷಗಳ ನಮ್ಮ ನಿರಂತರವಾದ ಈ ಪ್ರಯತ್ನದ ಬಗ್ಗೆ ನಮಗೆ ಹೆಮ್ಮೆಯಿದೆ ಹಾಗೂ ತೃಪ್ತಿ ಇದೆ. ಪತ್ರಿಕೆಯ ಪ್ರಾರಂಭದಿಂದ ಇಲ್ಲಿಯವರೆಗೆ ಪತ್ರಿಕೆಗೆ ನೆರವು, ಬೆಂಬಲ, ಪ್ರೋತ್ಸಾಹ, ಸಹಕಾರ ನೀಡಿ ಕಾಳಜಿಯನ್ನು ತೋರಿಸಿದ ಪ್ರತಿಯೊಬ್ಬರನ್ನು ಮಾನಸ ನಮ್ರತೆಯಿಂದ ನೆನೆಯುತ್ತದೆ. ಯುವ ಜನಾಂಗದ ಕನಸುಗಳಲ್ಲಿ ಮಾನಸದ ತಾತ್ವಿಕತೆಗಳು, ಮಾನಸ ಪತ್ರಿಕೆಯಂತಹ ಯೋಜನೆಗಳು ಫೀನಿಕ್ಸ್‌ನಂತೆ ಪುನಃ ಪುನಃ ಜೀವಂತಿಕೆಯನ್ನು ಪಡೆಯಲಿ ಎಂದು ಆಶಿಸುತ್ತೇವೆ. ನಮಸ್ಕಾರ.

–ಸಂಪಾದಕ ಮಂಡಳಿ










---

**ವರದಕ್ಷಿಣೆ ಸಲ್ಲ : ಹೆಣ್ಣೊಂದು ವಸ್ತು ಅಲ್ಲ.**

# ಸಹೃದಯತೆಗೆ ಕೃತಜ್ಞತೆಗಳು

ನಾವು ಮಾನಸ ಪತ್ರಿಕೆಯನ್ನು ನಿಲ್ಲಿಸುವುದಾಗಿ ಜನವರಿ 2012ರ ಸಂಚಿಕೆಯಲ್ಲಿ ಪ್ರಕಟಿಸಿದ್ದೆವು. ಅದರಂತೆ ಈ ಸಂಚಿಕೆಯೇ ಕೊನೆಯ ಸಂಚಿಕೆಯಾಗಿದೆ. ನಾವು ನಿಲ್ಲಿಸುತ್ತೇವೆ ಎಂದು ಹೇಳಿದಾಗಿನಿಂದಲೂ ನಮಗೆ ಅನೇಕ ಸಹೃದಯರು ತಮ್ಮ ಸಹಾಯಹಸ್ತವನ್ನು ಚಾಚಿ ಬೆಂಬಲವನ್ನು ವ್ಯಕ್ತಪಡಿಸುತ್ತಿದ್ದಾರೆ.

ರೈತ ಹೋರಾಟದಲ್ಲಿ ಇಂದಿಗೂ ತಮ್ಮನ್ನು ಗುರುತಿಸಿಕೊಂಡಿರುವ **ಅನಸೂಯಮ್ಮ** ಪ್ರಾರಂಭದಿಂದಲೂ ತಾವು ಮಾನಸ ಪತ್ರಿಕೆ ಓದುತ್ತಿದ್ದು, ಪತ್ರಿಕೆ ನಿಲ್ಲಿಸುವ ವಿಚಾರ ತಮಗೆ ನೋವನ್ನುಂಟು ಮಾಡಿದೆ, ಮಹಿಳಾಧ್ವನಿ ಉಡುಗಿ ಹೋಗುತ್ತದೆ, ನಾವೆಲ್ಲರೂ ಬೆಂಬಲಕ್ಕಿದ್ದೇವೆ ಮುಂದುವರೆಸಿ ಎಂದಿದ್ದಾರೆ.

ವಿಮರ್ಶಕ ಹಾಗೂ ಕೋಮುವಾದ ವಿರೋಧಿ ವೇದಿಕೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವ **ಡಾ. ರಾಜೇಂದ್ರ ಚನ್ನಿ** ಯವರು ಶಿವಮೊಗ್ಗದಿಂದ ಬೆಂಬಲ ವ್ಯಕ್ತಪಡಿಸಿ ಪತ್ರ ಬರೆದಿದ್ದಾರೆ. ಈ ಪತ್ರದಲ್ಲಿ :

"'ನಮ್ಮ ಮಾನಸ' ಇಂದು ತಲುಪಿತು. ವಿದಾಯದ ಮಾತು ಓದಿ ಆಘಾತವಾಯಿತು. 'ನಮ್ಮ ಮಾನಸ' ಇಂದು ಬರುತ್ತಿರುವ ಕನ್ನಡದ ಅತ್ಯುತ್ತಮ ಪತ್ರಿಕೆ. ನನ್ನ ತಿಳುವಳಿಕೆ ಹಾಗೂ ಅನುಭವವನ್ನು ನಿಮ್ಮ ಪತ್ರಿಕೆ ಹೆಚ್ಚಿಸಿದ ಹಾಗೆ ಇನ್ನಾವುವೂ ಮಾಡಿಲ್ಲ. ನಾನು ಭೇಟಿಯಾಗುವ ವಿದ್ಯಾರ್ಥಿಗಳು, ಸಂಶೋಧಕರು ಎಲ್ಲರಿಗೂ ಈ ಮಾತು ಹೇಳಿದ್ದೇನೆ.

"ಸಾಂಸ್ಕೃತಿಕವಾಗಿ ಮುಖ್ಯವಾದದ್ದನ್ನು ಕಳೆದುಕೊಳ್ಳುತ್ತೇವೆ. 'ನಮ್ಮ ಮಾನಸ' ಉಳಿಯುವಂತೆ ವೈಯಕ್ತಿಕವಾಗಿ ನಾವು ನಮ್ಮ ಕೈಲಾದಷ್ಟು ಆರ್ಥಿಕ ಸಹಾಯ ಮಾಡಬಹುದೆ? ದಯವಿಟ್ಟು ತಿಳಿಸಿ" ಎಂದಿದ್ದಾರೆ.

ಲೇಖಕ **ಟಿ.ಜಿ. ರಾಘವ** ಅವರು ವರ್ಷದಲ್ಲಿ ಮೂರು ಸಂಚಿಕೆಗಳನ್ನು ತಾವು ಪ್ರಾಯೋಜಿಸುವುದಾಗಿ ಹೇಳಿ ಪತ್ರಿಕೆಯನ್ನು ಮುಂದುವರೆಸಲು ಬೆಂಬಲ ವ್ಯಕ್ತಪಡಿಸಿದ್ದಾರೆ. ಲೇಖನ ಬರೆಯುವವರಿಗೆ ಸಂಭಾವನೆ ನೀಡುವ ಅಗತ್ಯವಿದ್ದಲ್ಲಿ ಅದನ್ನೂ ತಾವು ನೀಡುವುದಾಗಿ ಕೂಡಾ ಸಲಹೆ ನೀಡಿದ್ದಾರೆ. ಇರುವ ಒಂದು ಮಹಿಳಾ ಪತ್ರಿಕೆ ನಿಂತು ಹೋಗಬಾರದು ಎಂಬ ಕಾಳಜಿಯಿಂದ ಪತ್ರಿಕೆಯನ್ನು ಮುಂದು ವರೆಸುವುದಕ್ಕೆ ಹಲವಾರು ಸಲಹೆ ನೀಡಿ ನಮ್ಮನ್ನು ಪ್ರೋತ್ಸಾಹಿಸಿದ್ದಾರೆ.

ಲೇಖಕಿ **ಎಲ್.ಸಿ. ಸುಮಿತ್ರ** ಪತ್ರಿಕೆ ಮಹಿಳಾಧ್ವನಿಯಾಗಿದೆ, ನಿಲ್ಲಿಸಬೇಡಿ ಎಂದಿದ್ದಾರೆ. ಜೊತೆಗೆ "ಕುಪ್ಪಳಿಗೆ ನೀವೆಲ್ಲ ಬರುವುದಾದರೆ, 'ಮಾನಸ ಅವಲೋಕನ' ಎಂದೇ ಬನ್ನಿ, ನಾನು ಪ್ರಾಯೋಜಿಸುತ್ತೇನೆ" ಎಂದು ನಮಗೆ ಬೆಂಬಲ ನೀಡಿದ್ದಾರೆ.

ಸಮುದಾಯದ **ಗುಂಡಣ್ಣ** "ಪತ್ರಿಕೆ ಯಾಕೆ ನಿಲ್ಲಿಸುತ್ತೀರಿ, ನಮ್ಮೆಲ್ಲರ ಹತ್ತಿರ ಹಣ ಇಸಿದುಕೊಳ್ಳಿ, ಎಲ್ಲರನ್ನೂ ಕೂಡಿಸಿ ಒಂದು ಸಭೆ ಮಾಡಿ, ಮಹಿಳಾ ಪತ್ರಿಕೆ ನಿಲ್ಲಬಾರದು" ಎಂಬ ನಿಲುವನ್ನು ನಮ್ಮೊಡನೆ ಹಂಚಿಕೊಂಡಿದ್ದಾರೆ.

ಕವಯಿತ್ರಿ **ಲಲಿತಾ ಸಿದ್ಧಬಸವಯ್ಯ** ಕೂಡಾ "ಪತ್ರಿಕೆ ನಿಲ್ಲಿಸಬೇಡಿ, ಇದು ಹೆಣ್ಣುಮಕ್ಕಳ ಧ್ವನಿ" ಎಂದು ಹೇಳಿದ್ದಾರೆ.

ಲೇಖಕಿ ಹಾಗೂ ಕವಯಿತ್ರಿ ಸವಿತಾ ನಾಗಭೂಷಣ್ ವರ್ಷಕ್ಕೆ ಹತ್ತು ಸಾವಿರ ರೂ ಕೊಡುವುದಲ್ಲದೇ, ತಮಗೆ ಸಾಧ್ಯವಾದಾಗಲೆಲ್ಲಾ ಲೇಖನ ಕಳುಹಿಸುತ್ತೇನೆ, ಇರುವ ಒಂದು ಮಹಿಳಾಪತ್ರಿಕೆ ನಿಲ್ಲಬಾರದೆಂಬ ಆತಂಕವನ್ನು ಹಂಚಿಕೊಂಡಿದ್ದಾರೆ.

ರಂಗಕರ್ಮಿ **ಎಸ್. ಮಾಲತಿ** ಕೂಡಾ "ಪತ್ರಿಕೆ ನಿಲ್ಲಿಸಿದರೆ ಸಾಂಸ್ಕೃತಿಕ ಶೂನ್ಯ ಉಂಟಾಗುತ್ತದೆ, ಪತ್ರಿಕೆ ಮುಂದುವರೆಸಿ, ಹಣ ಸಹಾಯ ಮಾಡುತ್ತೇನೆ" ಎಂದು ತಮ್ಮ ನೆರವು ಹಸ್ತ ಚಾಚಿದ್ದಾರೆ. ಪೂರ್ಣ ಪ್ರಮಾಣದ ಕಾರ್ಯಕರ್ತೆಯನ್ನು ನಿಯೋಜಿಸಿಕೊಂಡು ಕೂಡಾ ಪತ್ರಿಕೆಯನ್ನು ಮುಂದುವರಿಸುವ ಆಲೋಚನೆ ಮಾಡಬಹುದು ಎಂದು ತಮ್ಮ ಆತಂಕವನ್ನು ತೋಡಿಕೊಂಡಿದ್ದಾರೆ.

ಕಾರ್ಯಕರ್ತೆ **ನಿರ್ಮಲ** "ನಮ್ಮಂಥವರು ನಿಮ್ಮ ಜೊತೆಗಿರುತ್ತೇವೆ. ತಾಂತ್ರಿಕ ಹಾಗೂ ಇತರ ಕೆಲಸಗಳನ್ನು ಹಂಚಿಕೊಳ್ಳುತ್ತೇವೆ, ನೀವು ಸುಮ್ಮನೆ ನಮಗೆ ಸಲಹೆ, ಸಹಕಾರ ನೀಡಿದರೆ ಸಾಕು" ಎಂದು ಸಹಾಯ ಹಸ್ತ ಚಾಚಿದ್ದಾರೆ.

**ವೆಂ. ವನಜ** ತಮಗೆ ಕೆಲಸ ಮಾಡಲು ಆಗದೇ ಇದ್ದುದಕ್ಕೆ ಬೇಜಾರು ಮಾಡಿಕೊಂಡು, "ಹಣಕಾಸಿನ ಸಹಾಯ ಖಂಡಿತ ಮಾಡುತ್ತೇನೆ, ಪತ್ರಿಕೆ ಮುಂದುವರೆಸಿ" ಎಂದಿದ್ದಾರೆ.

ಗಂಗಾವತಿಯಿಂದ ಪತ್ರ ಬರೆದಿರುವ **ವಿ. ಹರಿನಾಥಬಾಬು** "ಪತ್ರಿಕೆ ಇಂದಿನ ಸಾಂಸ್ಕೃತಿಕ ಲೋಕಕ್ಕೆ, ಸಾಹಿತ್ಯಕ, ಸಾಮಾಜಿಕ ಬದಲಾವಣೆಗೆ ಅತ್ಯಂತ ಅವಶ್ಯವೆಂದು ಭಾವಿಸಿದ್ದೇನೆ, ಹಾಗಾಗಿ ಪತ್ರಿಕೆಯ ಪಯಣ ಮುಂದುವರಿಸಿರಿ" ಎಂದು ಒತ್ತಾಯಿಸಿದ್ದಾರೆ.

ಉಡುಪಿಯ ವಿಮರ್ಶಕ **ಮುರಳೀಧರ ಉಪಾಧ್ಯ** ಹಾಗೂ ಮೈಸೂರಿನಲ್ಲಿರುವ ವಿಮರ್ಶಕಿ **ಪ್ರೀತಿ ಶುಭಚಂದ್ರ** **'ಇ-ಪತ್ರಿಕೆ'**ಯಾಗಿ ಮಾನಸ ಮುಂದುವರೆಸಬಹುದೆಂಬ ಸಲಹೆ ನೀಡಿದ್ದಾರೆ.

ಉಡುಪಿಯಲ್ಲಿ ಕನ್ನಡ ಉಪನ್ಯಾಸಕಿಯಾಗಿರುವ **ಸುಮ** ಅವರು ಪತ್ರಿಕೆ ನಿಲ್ಲುತ್ತಿರುವುದರ ಬಗ್ಗೆ ತಮ್ಮ ದಿಗ್ಭ್ರಮೆ, ಆತಂಕ ವ್ಯಕ್ತಪಡಿಸಿದ್ದಾರೆ. "ಬರೆಯುವ, ಹಣ ಹಾಗೂ ಚಂದಾಮಾಡಿಸುವ ಜವಾಬ್ದಾರಿ ತಾವು ತೆಗೆದುಕೊಂಡರೆ ಪತ್ರಿಕೆ ಮುಂದುವರೆಸುವಲ್ಲಿ ಸಹಾಯವಾದೀತೆ" ಎಂದು ಕಳಕಳಿಯಿಂದ ವಿಚಾರಿಸಿದ್ದಾರೆ.

ನಮ್ಮ ನಡುವೆಯೇ ಇರುವ **ನೀಲಾಂಜನ** ಹಾಗೂ **ದು. ಸರಸ್ವತಿ** ಮಾನಸದಂತಹ ಸ್ವಾಯತ್ತ ಪತ್ರಿಕೆಯ ಧ್ವನಿ ಇಂತಹ ಸಂದರ್ಭದಲ್ಲಿ ಉಡುಗಿ ಹೋಗಬಾರದೆನ್ನುವ ಕಾಳಜಿ, ಆತಂಕವನ್ನು ಇಬ್ಬರೂ ನಮ್ಮ ಜೊತೆ ಹಂಚಿಕೊಂಡಿದ್ದಾರೆ. ಲೇಖಕಿ ಭಾಷ್ಯಂ ತನುಜೆ (ಲಲಿತ) ಅವರು "ಪತ್ರಿಕೆ ಮುನ್ನಡೆಸಿ, ಯಾಯ ಬಗೆಯ ಸಹಾಯವಾದರೂ ಕೊಡಬಲ್ಲೆ" ಎಂದಿದ್ದಾರೆ.

ನಮ್ಮ ನಡುವೆಯೇ ಇರುವ ಚಲನಚಿತ್ರ ನಿರ್ದೇಶಕ **ಸುರೇಶ ಬಿ., ಮೇಘ, ವರ್ಷ, ಶಂಕರ್, ರಾಜ್‌ಕುಮಾರ್** "ಹಣಕಾಸು, ತಾಂತ್ರಿಕ ಕೆಲಸ ಇತ್ಯಾದಿಗಳಿಗೆ ಸಹಾಯ ಮಾಡುತ್ತೇವೆ, ಪತ್ರಿಕೆ ಮುಂದುವರೆಸಿ" ಎಂದು ಹೇಳುತ್ತಲೇ ಇದ್ದಾರೆ. ಇವರೆಲ್ಲರ ಸಹೃದಯತೆಯನ್ನು ಮಾನಸಪತ್ರಿಕೆ ಸದಾ ನೆನೆಯುತ್ತದೆ. ಕೇವಲ ಹಣಕಾಸು, ಅಂಚೆ ಇಲಾಖೆಯ ಕಿರುಕುಳ ಇತ್ಯಾದಿಗಳಿಗಿಂತ ಬೇರೆಯಾದ ಕೆಲವು ತಾತ್ವಿಕ ಕಾರಣಗಳಿಗಾಗಿ ಪತ್ರಿಕೆ ನಿಲ್ಲುತ್ತಿದೆ. ಆ ಬಗ್ಗೆ ಜನವರಿ, ಫೆಬ್ರವರಿ ತಿಂಗಳ ಸಂಪಾದಕೀಯದಲ್ಲಿ ವಿವರಗಳಿವೆ, ಗಮನಿಸಿ.

ನಿರಂತರವಾಗಿ ಪತ್ರಿಕೆ ಪ್ರಕಟಿಸಿ, ನಮ್ಮೆಲ್ಲ ಕಷ್ಟ ಸುಖಗಳ ಜೊತೆ ಸ್ಪಂದಿಸಿ ವ್ಯವಹರಿಸಿದ ಇಳಾ ಪ್ರಕಾಶನದ ಗುರುಮೂರ್ತಿ ಹಾಗೂ ಎಲ್ಲಾ ರೀತಿಯ ಸಹಕಾರ ನೀಡಿದ ಇಳಾ ಮುದ್ರಣದ ಸಿಬ್ಬಂದಿ ವರ್ಗದವರನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಯುತ್ತೇವೆ.

***–ಸಂಪಾದಕ ಮಂಡಳಿ***

# ಭಾರತದ ಮೊದಲ ಛಾಯಾಗ್ರಾಹಕಿ

■ ಚಂಪಾವತಿ ಎಚ್.ಎಸ್.

ದಿನಾಂಕ 15-1-2012ರಂದು ಮಹಿಳಾ ಪ್ರಪಂಚದ ಅದ್ಭುತ ನಕ್ಷತ್ರವೊಂದು ಮರೆಯಾಯಿತು. ಪುರುಷ ಪ್ರಪಂಚದ ವೃತ್ತಿಪರ ಛಾಯಾಕ್ಷೇತ್ರಕ್ಕೆ ಪ್ರವೇಶಿಸಿದ ಮೊದಲ ಮಹಿಳೆ, ಈಕೆಯೇ ಹೊವ್ವೆ ವ್ಯಾರಾವಾಲ. ವೃತ್ತಿಪರ ಛಾಯಾಗ್ರಾಹಕಿಯಾದ ಈಕೆ ತೆಗೆದಿರುವ ಛಾಯಾಚಿತ್ರಗಳೂ ಅಪರೂಪವಾದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿವೆ. ಹೊವ್ವೆ 1913ರಲ್ಲಿ ಗುಜರಾತಿನ ಪಾರ್ಸಿ ಕುಟುಂಬದಲ್ಲಿ ಜನಿಸಿದರು. ಅವರ ತಂದೆ ಪಾರ್ಸಿ-ಉರ್ದು ನಾಟಕ ಕಂಪನಿಯಲ್ಲಿ ನಟರಾಗಿದ್ದರು. ಅವರ ಮರಣದ ನಂತರ ಆಕೆಯ ತಾಯಿ ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿದ್ದರು. ಆಕೆ ಓದುತ್ತಿದ್ದ ಗುಜರಾತಿ ಶಾಲೆಯಲ್ಲಿ ಹುಡುಗರ ಜೊತೆ ಓದುತ್ತಿದ್ದ ಹೆಣ್ಣು ಮಗು ಹೊವ್ವೆ ಒಬ್ಬಳೆ. ಸಂತ ಕ್ಸೇವಿಯರ್ ಕಾಲೇಜಿನಲ್ಲಿ ಹೂವ್ವೆ ಡಿಪ್ಲೊಮಾ ಪಡೆದರು. ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು.

ಸ್ನೇಹಿತರಾದ ಮಾಣಿಕ್ ಷಾ ಅವರಿಂದ ಹೊವ್ವೆ ಫೋಟೋಗ್ರಫಿಯನ್ನು ಕಲಿತರು. ಅನಂತರ ಅವರನ್ನೇ ವಿವಾಹವಾದರು. 1930ರಿಂದ 1940ರ ವರೆಗೆ ಇಬ್ಬರೂ ಮುಂಬೈ ರಸ್ತೆಗಳಲ್ಲಿ ಓಡಾಡುತ್ತ ಅಪರೂಪದ ಚಿತ್ರಗಳನ್ನು ಸೆರೆಹಿಡಿದಿದ್ದರು. 1942ರಲ್ಲಿ ಉದ್ಯೋಗದ ಕಾರಣ ಇಬ್ಬರೂ ದೆಹಲಿಯಲ್ಲಿ ನೆಲೆಸಿದರು. ಇಲ್ಲಿಂದಲೇ ಹೊವ್ವೆರವರ ಛಾಯಾಗ್ರಹಣದ ಹೊಸ ದಿಕ್ಕು ಪ್ರಾರಂಭವಾಯಿತು.





ಇಂದಿರಾಗಾಂಧಿಯವರನ್ನು ಕ್ಲಿಕ್ಕಿಸುತ್ತಿರುವ ಮೊಟ್ಟಮೊದಲ ಛಾಯಾಗ್ರಾಹಕಿ ಹೊವ್ವೆ, ಸಹೋದ್ಯೋಗಿಗಳೊಂದಿಗೆ



ಹೊವೈ ಅವರು ತೆಗೆದ ಒಂದು ವಿಶೇಷ ಚಿತ್ರ

ಹೊವೈ ಸಾಹಸಿ ಮಹಿಳೆ. ವಿಶೇಷ ಹಾಗೂ ವಿಶಿಷ್ಟ ಚಿತ್ರಗಳನ್ನು ಸೆರೆಹಿಡಿಯಲು ಹೊವೈ ಎಂತಹ ಕಷ್ಟಗಳನ್ನೂ ಎದುರಿಸಲು ತಯಾರಿರುತ್ತಿದ್ದರು. ಹೊವೈ ಸೆರೆಹಿಡಿದ ಚಿತ್ರಗಳು ಅಪರೂಪವಾದವು. ಭಾರತ ಸ್ವಾತಂತ್ರ್ಯ ಪಡೆದ ಸಂದರ್ಭಗಳಲ್ಲಿ ತೆಗೆದ ಈ ಚಿತ್ರಗಳು ಚಾರಿತ್ರಿಕ ಮಹತ್ವವನ್ನು ಪಡೆದಿವೆ. 1959ರಲ್ಲಿ ಯುವ ದಲೈಲಾಮ ಗಡಿಯನ್ನು ದಾಟುವ ಕ್ಷಣಗಳನ್ನು ದಾಖಲಿಸುವ ಸಂದರ್ಭದಲ್ಲಿ ಹೊವೈ ಸೈನ್ಯದ ಟ್ರಕ್‌ವೊಂದನ್ನು ಹತ್ತಿ ಬರುತ್ತಾರೆ. ಮಹಮದ್ ಅಲಿ ಜಿನ್ನಾರವರ ಕೊನೆಯ ಪತ್ರಿಕಾಗೋಷ್ಠಿಯನ್ನು ದಾಖಲಿಸುವ ಸಂದರ್ಭದಲ್ಲಿ ಎಡವಿ ಬಿದ್ದುದು ಸಹ ದಾಖಲಾಗಿದೆ. ಭಾರತ–ಪಾಕಿಸ್ತಾನದ ವಿಭಜನೆಯ ಸಂದರ್ಭದಲ್ಲಿ ಆಚಾರ್ಯ ಕೃಪಲಾನಿಯವರು ಕಾಂಗ್ರೆಸ್ ಕಾರ್ಯಕಾರಿ ಮಂಡಳಿಯ ಅಧ್ಯಕ್ಷರಾಗಿದ್ದರು. ಸಭೆ ನಡೆಯುತ್ತಿರುವ ಸಂದರ್ಭದಲ್ಲಿ ಕೃಪಲಾನಿ ತಮ್ಮ ಸುತ್ತಲಿದ್ದ ಛಾಯಾಗ್ರಾಹಕರನ್ನು ನೋಡಿ ಅಸಹನೆಯನ್ನು ವ್ಯಕ್ತಪಡಿಸಿದ್ದರು. ಆದರೆ ಹೊವೈಯವರು ಅಲ್ಲಿದ್ದ ಬೆಂಚ್‌ಗಳ ಹಿಂದೆ ಅಡಗಿಕೊಂಡು ವಿಶೇಷವಾದ ಅವಕಾಶಕ್ಕಾಗಿ ಕಾದು ಅಪರೂಪವಾದ ಚಿತ್ರಗಳನ್ನು ಸೆರೆ ಹಿಡಿದಿದ್ದರು.

ಹೊವ್ವೆ ಚಿತ್ರಗಳನ್ನು ಸೆರೆ ಹಿಡಿಯುವಾಗ ಸದಾ ವಿಶೇಷವಾದದ್ದನ್ನು ಹಾಗೂ ಹೊಸತನ್ನು ಹುಡುಕುತ್ತಿದ್ದರು. ಅವರು ತೆಗೆದಿರುವ ಚಿತ್ರಗಳಲ್ಲಿ ಈ ಅಂಶಗಳು ಎದ್ದು ಕಾಣುತ್ತವೆ.

ಆಕೆಗೆ 95 ವರ್ಷ ವಯಸ್ಸು. ಈ ಇಳಿವಯಸ್ಸಿನಲ್ಲೂ ಈಕೆಗೆ ಅಮೆರಿಕಾ ಹಾಗೂ ಇಂಗ್ಲೆಂಡಿಗೆ ಭೇಟಿ ನೀಡಿದಾಗ ಗಾಂಧೀಜಿಯ ಪುತ್ಥಳಿಯನ್ನು ಸೆರೆಹಿಡಿಯುವ ಅವಕಾಶ ದೊರೆತಿತ್ತು. ಗಾಂಧೀಜಿಯ ಮುಖದಲ್ಲಿ ಕನ್ನಡಕವಿರಲಿಲ್ಲವೆಂಬುದನ್ನು ಅವರು ಮೊದಲು ಗಮನಿಸಿದ್ದರು.

ಅವರ ಆಪ್ತಗೆಳತಿ ಶಬೀನಾ ಅವರು ಹೊವ್ವೆ ವ್ಯಕ್ತಿತ್ವದ ಬಗ್ಗೆ ಬರೆದಿದ್ದಾರೆ. ಹೊವ್ವೆಯವರ ಕೈಬರಹ ತುಂಬಾ ಚೆನ್ನಾಗಿದ್ದು ಆಕೆಯು ಪ್ರತಿಯೊಂದು ಕೆಲಸವನ್ನೂ ತುಂಬಾ ಶಿಸ್ತಿನಿಂದ ಮಾಡುತ್ತಿದ್ದರು ಎನ್ನುವ ಶಬೀನಾ 2005ರಲ್ಲಿ ಹೊವ್ವೆ ತಮಗೆ ಬರೆದ ಪತ್ರದಲ್ಲಿ "ನೀನು ಬರೆದ ಪತ್ರದ ವಿಳಾಸವನ್ನು ಅಂಚೆಯವರು ಸುಲಭವಾಗಿ ಓದುವಂತಿರಬೇಕು. ಅವರು ಎಷ್ಟು ಪತ್ರಗಳನ್ನು ಹಂಚಬೇಕಾಗುತ್ತದೆ, ಅವರ ಕೆಲಸವನ್ನು ನೀನು ಸುಲಭ ಮಾಡಬೇಕು" ಎಂದು ಬರೆದಿದ್ದರು ಎಂದು ನೆನಪಿಸಿಕೊಳ್ಳುತ್ತಾ, ತಾನು ತೆಗೆದ ಚಿತ್ರಗಳನ್ನು ಜೋಪಾನವಾಗಿ ಸಂರಕ್ಷಿಸಿಡುತ್ತಿದ್ದುದರ ಬಗ್ಗೆ ವಿವರವಾಗಿ ಬರೆಯುತ್ತಾರೆ. ಹೊವ್ವೆ ಅವರ ನಿಪುಣತೆ ಕೇವಲ ಚಿತ್ರಗಳನ್ನು ತೆಗೆಯುವುದರಲ್ಲಿ ಮಾತ್ರವಲ್ಲ, ಮನೆಯ ವಸ್ತುಗಳ ನಿರ್ವಹಣೆಯಲ್ಲಿಯೂ ಆಕೆಯ ಕೌಶಲ ಎದ್ದು ಕಾಣುತ್ತಿತ್ತು. ಅವರ ಮನೆಯಲ್ಲಿದ್ದ ಎಷ್ಟೋ ವಸ್ತುಗಳು ಕಲಾಕೃತಿಗಳಂತೆ ಕಾಣುತ್ತಿದ್ದವು. ಆಕೆಯ ಬರವಣಿಗೆ, ಆಕೆಯ ಇತರ ವಸ್ತುಗಳು, 'ಮನೆಯ ಮದ್ದು'ಗಳ ವಿವರ ಮುಂತಾದವುಗಳನ್ನು ಕಾಯ್ದಿರಿಸಬೇಕಾದಂಥವು. ಆಕೆ ಕೂದಲನ್ನು ತಾನೇ ಕತ್ತರಿಸಿಕೊಳ್ಳುತ್ತಿದ್ದರು. ತನ್ನ ಬಟ್ಟೆಗಳನ್ನು ತಾನೇ ಹೊಲಿದುಕೊಳ್ಳುತ್ತಿದ್ದರು. ಚಪ್ಪಲಿಯನ್ನು ತಾನೇ ರಿಪೇರಿ ಮಾಡಿಕೊಳ್ಳುತ್ತಿದ್ದರು. ತನ್ನ ಮನೆಯಮುಂದೆ ಹಾಕಿದ್ದ ಆಕೆಯ ಹೆಸರಿನ ಪ್ಲೇಟ್ ಸಹ ಒಡೆದ ಬಳೆಯ ಚೂರುಗಳಿಂದ ಮಾಡಲಾಗಿತ್ತು. ಇವೆಲ್ಲ ಆಕೆಯಲ್ಲಡಗಿದ್ದ ಕಲಾತ್ಮಕತೆಯ ಅಭಿವ್ಯಕ್ತಿಯಾಗಿತ್ತು.

ಆಕೆ ವಡೋದರದಲ್ಲಿ ಸ್ವತಂತ್ರವಾಗಿ ಬದುಕುತ್ತಿದ್ದರು. ಸದಾ ಆಕೆ ತನ್ನನ್ನು ರಾಬಿನ್‌ಸನ್ ಕ್ರೂಸೋಗೆ ಹೋಲಿಸಿಕೊಳ್ಳುತ್ತಿದ್ದರೆಂದು ಆಕೆಯ ಸ್ನೇಹಿತೆ ಹೇಳುತ್ತಾರೆ. ಆಕೆ ಬಯಸುತ್ತಿದ್ದುದು ಒಳ್ಳೆಯ ಸ್ನೇಹಿತರು, ಶಾಂತಿ, ನೆಮ್ಮದಿ ಹಾಗೂ ಬಿಸಿಲಿಗೆ ಮೈಯೊಡ್ಡಿ ಕೂಡುವುದು. ಇಳಿವಯಸ್ಸಿನಲ್ಲೂ ಕ್ರಿಯಾಶೀಲಳಾಗಿದ್ದ ಹೊವ್ವೆ ಇಂದು ನಮ್ಮೆದುರಿಗಿಲ್ಲ. ಆದರೆ ಆಕೆ ತೆಗೆದ ಚಿತ್ರಗಳು ಸದಾ ಜೀವಂತವಾಗಿರುತ್ತವೆ. ❑



1948ರಲ್ಲಿ ಸಿ. ರಾಜಗೋಪಾಲಾಚಾರ್ಯ ಅವರು ಗವರ್ನರ್ ಜನರಲ್ ಆದ ಸಂದರ್ಭದಲ್ಲಿ ಸರ್ದಾರ್ ಪಟೇಲ್ ಅವರು ಜವಹರಲಾಲ್ ನೆಹರೂ ಅವರ ಸಂಪುಟ ಸದಸ್ಯರಿಗೆ ಏರ್ಪಡಿಸಿದ ಸಂತೋಷಕೂಟ. ಚಿತ್ರದಲ್ಲಿ; ರಫಿ ಅಹಮದ್ ಕಿದ್ವಾಯ್, ಬಲದೇವ್ ಸಿಂಗ್, ಮೌಲಾನಾ ಆಜಾದ್, ಜವಹರಲಾಲ್ ನೆಹರು, ಸಿ. ರಾಜಗೋಪಾಲಾಚಾರ್ಯ, ಸರ್ದಾರ್ ವಲ್ಲಭಭಾಯ್ ಪಟೇಲ್, ಶ್ಯಾಮಪ್ರಸಾದ್ ಮುಖರ್ಜಿ, ಗೋಪಾಲಸ್ವಾಮಿ ಅಯ್ಯಂಗಾರ್ ಮತ್ತು ಜಯರಾಮದಾಸ್ ದೌಲತ್‌ರಾಂ.



ಬಾಬು ರಾಜೇಂದ್ರ ಪ್ರಸಾದರು ರಾಷ್ಟ್ರಪತಿಯಾದ ಸಂದರ್ಭದಲ್ಲಿ ಸಾಂಪ್ರದಾಯಿಕ ಮೆರವಣಿಗೆ.



ಬ್ರಿಟಿಷ್ ಡೆಪ್ಯುಟಿ ಹೈಕಮಿಷನರ್ ಅವರ ಪತ್ನಿ ಶ್ರೀಮತಿ ಸೈಮನ್ **(Simon)** ಅವರೊಂದಿಗೆ ಏರ್‌ಪೋರ್ಟ್‌ನಲ್ಲಿ ಜವಹರಲಾಲರು.

ಜವಹರಲಾಲರ ನಿಧನದ ನಂತರದ ಶ್ರದ್ಧಾಂಜಲಿ ಸಭೆಯಲ್ಲಿ ರಾಷ್ಟ್ರಪತಿಗಳಾಗಿದ್ದ ಡಾ. ರಾಜೇಂದ್ರ ಪ್ರಸಾದ್, ಡಾ. ಜಾಕೀರ್ ಹುಸೇನ್ ಮತ್ತು ಡಾ. ರಾಧಾಕೃಷ್ಣನ್.



ಖಾನ್ ಅಬ್ದುಲ್ ಗಫಾರ್ ಖಾನ್
ಮತ್ತು ಮಹಾತ್ಮಗಾಂಧಿ.



ಪತಿ ಫೆರೋಜ್ ಗಾಂಧಿ ಅವರೊಂದಿಗೆ ಇಂದಿರಾಗಾಂಧಿ.
(ಹೊವೈ ಬಾಬ್‌ಕಟ್ ಮಾಡಿಸಿದಾಗ ಮೆಚ್ಚಿ ಅಭಿನಂದಿಸಿದ
ಇಂದಿರಾಗಾಂಧಿ, ಕೆಲವೇ ದಿನಗಳ ನಂತರ ತಾವೂ ಅದೇ ರೀತಿ
ಹೇರ್ ಕಟ್ ಮಾಡಿಸಿಕೊಂಡರೆಂದೂ ಮುಂದೆ ಅದೇ ಸ್ಟೈಲ್
ಮುಂದುವರಿಸಿದರು ಎಂದೂ ದಾಖಲಿಸಲಾಗಿದೆ.)



ತೋಟಗಾರಿಕೆ ಬಗ್ಗೆ ಮೊಮ್ಮಕ್ಕಳಾದ
ರಾಜೀವ್‌ಗಾಂಧಿ ಮತ್ತು
ಸಂಜಯ್‌ಗಾಂಧಿ ಅವರೊಂದಿಗೆ
ಚರ್ಚಿಸುತ್ತಿರುವ ಜವಹರಲಾಲ್
ನೆಹರೂ (1950)

26–1–1950ರಲ್ಲಿ ಪ್ರಥಮ ಗಣರಾಜ್ಯೋತ್ಸವದ ಪೆರೇಡ್. ಬಾಬುರಾಜೇಂದ್ರ ಪ್ರಸಾದರು ಅಭಿನಂದನೆ (ಸೆಲ್ಯೂಟ್) ಸ್ವೀಕರಿಸುತ್ತಿದ್ದಾರೆ. ಅವರ ಸುತ್ತ ರಕ್ಷಣಾಪಡೆ (ಸೆಕ್ಯೂರಿಟಿ) ಇಲ್ಲ. ಗಮನಿಸಿ. ಇದು ಪುರಾನಾಖಿಲಾದ ಹಿನ್ನೆಲೆಯಿರುವ ಇವತ್ತಿನ ನ್ಯಾಷನಲ್ ಸ್ಟೇಡಿಯಂನಲ್ಲಿ. ಅನಂತರ ಇಂಡಿಯಾಗೇಟ್‌ಗೆ ವರ್ಗಾಯಿಸಲಾಯಿತು.



ಹೊವೈ ಮತ್ತು ಕುಟುಂಬ ಸದಸ್ಯರು, ಅವರು ತಾವು ಇಷ್ಟಪಟ್ಟು 1955ರಲ್ಲಿ 11,000 ರೂ.ಗಳಿಗೆ (ತೆರಿಗೆ ಸಹಿತ) ಕೊಂಡ ಡಿ.ಎಲ್.ಡಿ. 13 (ಅದನ್ನು 'ಡಾಲ್ಡ' ಎಂದು ಕರೆದದ್ದೂ ಅವರೇ) ಕಾರಿನ ಜೊತೆ.



ಶಾಂತಿದೂತ ನೆಹರು

# ಅಲೆಯ ತಿರುಗುವಿಕೆ : ಮೀನುಗಾರಿಕೆಯಲ್ಲಿನ ಮಹಿಳೆಯರ ಬದುಕು ಹಾಗೂ ಬಂಡವಾಳದ ಆಕ್ರಮಣ



■ ನೀಲಾಂಜನ ಬಿಸ್ವಾಸ್
ಅನು: ಚಂಪಾವತಿ ಎಚ್.ಎಸ್.

ಮೀನುಗಾರಿಕೆಯಲ್ಲಿರುವ ಮಹಿಳೆಯರ ಕುರಿತಾದ ಕಳೆದ ಮೂರು ದಶಕಗಳ ಸಾಹಿತ್ಯದ ಅವಲೋಕನ ಐದು ರೀತಿಯ ಅಭಿವೃದ್ಧಿಯನ್ನು ಪ್ರಚುರಪಡಿಸುತ್ತವೆ. ಮೊದಲನೆಯದಾಗಿ, 30 ವರ್ಷಗಳ ಅವಧಿಯಲ್ಲಿ ಶ್ರಮದ ಚೌಕಟ್ಟಿನಿಂದ ಪರಿಸರದ ಚೌಕಟ್ಟಿಗೆ ಚಲಿಸಿದ ಸಂಶೋಧನಾ ವಿವರಣೆ ಮಹಿಳೆಯರ ಶ್ರಮದ ಕಲ್ಪನೆಯಿಂದ ದೂರವಾಗಿ ಉಳಿಯುವಿಕೆ ಹಾಗೂ ಬದುಕಿನಾಧಾರದ ಕಲ್ಪನೆಗಳಿಗೆ ಗಮನ ಕೇಂದ್ರೀಕರಿಸಿದವು. ಎರಡನೆಯದಾಗಿ, ಮಹಿಳೆಯ ಸಬಲೀ"ರಣದ ವಿಚಾರ ಮಹಿಳೆಯರ ಶೋಷಣೆಯ ಹಾಗೂ ತುಳಿತದ ವಿಚಾರದ ಮೇಲೆ ಮೇಲುಗೈ ಪಡೆಯಿತು. ಮೂರನೆಯದಾಗಿ, ಈ ಹಂತದಲ್ಲಿ ಹಕ್ಕು ಆಧಾರಿತ ದೃಷ್ಟಿಕೋನಗಳು ಬಲಗೊಂಡವು. ನಾಲ್ಕನೆಯದಾಗಿ, 'ಸಮುದಾಯದ' ಕಲ್ಪನೆ ಈ ಹಂತದಲ್ಲಿ ಹುಟ್ಟಿಕೊಂಡಿತು. ಕೊನೆಯದಾಗಿ ವಿಮೋಚನೆ ಹಾಗೂ ಸ್ವತಂತ್ರ ಮಾರುಕಟ್ಟೆಯನ್ನು ಎಲ್ಲದಕ್ಕೂ ಏಕ ಉತ್ತರವಾಗಿ ಹೊಂದಿದ ವಿಚಾರಧಾರೆಯಲ್ಲಿ ವಿವಿಧ ಅನುದಾನ ಸಂಸ್ಥೆಗಳು ಮೀನುಗಾರಿಕೆಯ ಚಟುವಟಿಕೆಗಳನ್ನು ರೂಪಿಸುವಂತಾಯಿತು.

ಈ ಎಲ್ಲಾ ಅಭಿವೃದ್ಧಿಗಳು ಒಂದಕ್ಕೊಂದು ತಳಕು ಹಾಕಿಕೊಂಡು ರೂಪುಗೊಂಡಿವೆ ಎಂಬುದನ್ನು ಅರ್ಥಮಾಡಿಕೊಳ್ಳುವುದು ಮುಖ್ಯವಾಗುತ್ತದೆ. ಹಾಗಾಗಿ ಇವುಗಳನ್ನು ಒಟ್ಟಿಗೆ ಓದುವುದು, ವಿವರಿಸುವುದು ಅಗತ್ಯ. ಕೊನೆಯ ಅಂಶದಲ್ಲಿರುವ ಹೆಚ್ಚಾಗುತ್ತಿರುವ ಅನುದಾನ ಇಡಿಯ ವಿಶ್ವದ ಅಭಿವೃದ್ಧಿಯ ಏಕರೂಪದ ಭಾಷೆ, ಕಾರ್ಯಕ್ರಮ, ಚರ್ಚೆಯನ್ನು ಹುಟ್ಟುಹಾಕಿ ದಬ್ಬಾಳಿಕೆ ನಡೆಸುತ್ತಿರುವುದರಿಂದ ಇತರ ಅಭಿವೃದ್ಧಿಗಳನ್ನು ಸಹ ಇದು ರೂಪುಗೊಳಿಸಿದೆ.

43.5 ಮಿಲಿಯನ್ ಜನರು ಇಡಿಯ ಪ್ರಪಂಚದಲ್ಲಿ ಮೀನು ಹಿಡಿಯುವ ಹಾಗೂ ಮೀನುಗಾರಿಕೆಯ ಕೆಲಸದಲ್ಲಿ ನಿರತರಾಗಿದ್ದಾರೆ. ಇವರಲ್ಲಿ 90% ಸಣ್ಣ ಪ್ರಮಾಣದ ಮೀನುಗಾರಿಕೆಯಲ್ಲಿ ತೊಡಗಿರುವವರು. ಬಹಳಷ್ಟು ಜನ ಏಷಿಯಾದಲ್ಲಿಯೇ ಬದುಕುತ್ತಾರೆ. ಅತ್ಯಂತ ಕಡು ಬಡತನದಲ್ಲಿಯೇ ಇವರ ಬದುಕು. ಒಬ್ಬ ನೇರವಾಗಿ ಮೀನುಗಾರಿಕೆಯಲ್ಲಿ ತೊಡಗಿದರೆ, ನಾಲ್ಕು ಜನ ಅದಕ್ಕೆ ಬೇಕಾದ ಕೆಲಸಗಳಲ್ಲಿ ತೊಡಗಿರುತ್ತಾರೆ. ಇವುಗಳನ್ನು ಕೆಲಸ ಎಂದೇ ಪರಿಗಣಿಸುವುದಿಲ್ಲ. ಮೀನು ಸಂರಕ್ಷಿಸುವ, ಒಣಗಿಸುವ, ಮಾರಾಟ ಮಾಡುವ, ಸಾಗಿಸುವ, ಬಲೆ ಹೆಣೆಯುವ, ದೋಣಿ ಕಟ್ಟುವ, ಇಂಧನ ವ್ಯವಸ್ಥೆ, ಯಂತ್ರದ ರಿಪೇರಿ ಈ ಕೆಲಸಗಳು ಆರ್ಥಿಕ ಉತ್ಪಾದನೆಯ ವಲಯದಲ್ಲಿ ಸೇರುವುದೇ ಇಲ್ಲ. ಹಾಗಾಗಿ 2010ರ ಮೀನುಗಾರಿಕೆಯ ಅಂಕಿ–ಅಂಶಗಳಲ್ಲಿ ಇಂತಹ ಕೆಲಸ ಮಾಡುವ 174 ಮಿಲಿಯನ್ ಮಹಿಳೆಯರು ಅದೃಶ್ಯರಾಗಿಯೇ ಉಳಿದುಬಿಟ್ಟಿದ್ದಾರೆ. ಇವರ ದುಡಿಮೆಗೆ ಹಣ ಸಿಗುವುದೇ ಇಲ್ಲ, ಅಥವಾ ಅತ್ಯಂತ ಕಡಿಮೆ ಹಣ ಸಿಗುತ್ತದೆ. ಬದುಕಿನ ನಿರ್ವಹಣೆಗಾಗಿ ಮೀನುಗಾರಿಕೆಯನ್ನು ಅವಲಂಬಿಸುವವರ ಸಂಖ್ಯೆ ಪ್ರತಿವರ್ಷ ಹೆಚ್ಚಾದ ಹಾಗೆ ಅದೇ ಪ್ರಮಾಣದಲ್ಲಿ ಮಹಿಳೆಯರ ಶ್ರಮವನ್ನು ಕೂಡಾ ಬೆಲೆ ಇಲ್ಲದೇ ಬಳಕೆ ಮಾಡಿ ಶೋಷಿಸುವುದೂ ಕೂಡಾ ಹೆಚ್ಚಾಗುತ್ತಿದೆ. ಇತ್ತೀಚಿನ ವರ್ಷಗಳಲ್ಲಷ್ಟೇ ಮಹಿಳೆಯರ ಪ್ರಶ್ನೆ ಮೀನುಗಾರಿಕೆಯಲ್ಲಿ ಕಾಣಿಸಿಕೊಳ್ಳುತ್ತಿರುವುದು. ಇಲ್ಲಿಯವರೆಗೆ ಮಹಿಳೆಯರ ಪ್ರಶ್ನೆ ಅಗೋಚರವಾಗಿಯೇ ಉಳಿದಿತ್ತು ಎಂಬುದು ವ್ಯಂಗ್ಯದ ವಿಚಾರವೇ ಸರಿ.

*ಇತ್ತೀಚಿನ ವರ್ಷಗಳಲ್ಲಿ ಮೀನುಗಾರಿಕೆಯಲ್ಲಿರುವ ಮಹಿಳೆಯರ ಬಗೆಗಿನ ಸಂಶೋಧನೆ ರಾಜಕೀಯ ಆರ್ಥಿಕ ಚೌಕಟ್ಟಿನಿಂದ ರಾಜಕೀಯ ಪರಿಸರದ ಚೌಕಟ್ಟಿಗೆ ಸರಿದಿದೆ. ಇದರ ಅರ್ಥವೇನೆಂದರೆ, ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಅರ್ಥೈಸಲ್ಪಡುತ್ತಿದ್ದ ಶ್ರಮ, ಉತ್ಪಾದನಾ ಸಂಬಂಧಗಳು, ಹಾಗೂ ಹೆಚ್ಚಿನ ಮೌಲ್ಯದ ಕಸಿದುಕೊಳ್ಳುವಿಕೆಯ ವಿವರಣೆಗಳಲ್ಲಿ ಬದಲಾವಣೆಯಾಗಿ ಪರಿಸರ ಉಳಿಸುವಿಕೆ, ಜೀವನಾಧಾರದ ನಿರ್ವಹಣೆ ಹಾಗೂ ಬಡತನದ ಚರ್ಚೆಯ ಪರವಾಗಿ ಕೇಂದ್ರೀಕರಿಸಲ್ಪಟ್ಟ ವಿವರಣೆಗಳಲ್ಲಿ ಸಂಶೋಧನೆಗಳು ಮೀನುಗಾರಿಕೆಯ ಮಹಿಳೆಯರ ಬದುಕನ್ನು ವಿವರಿಸತೊಡಗಿವೆ. ಈ ಹಂತದಲ್ಲಿ ಮಹಿಳೆಯ ಶ್ರಮ ಅಗಾಧ ಪ್ರಮಾಣದಲ್ಲಿ ಸಂಘಟಿತವಾಗಿದ್ದಲ್ಲದೇ ಮೀನುಗಾರಿಕೆಯ ಆರ್ಥಿಕತೆಯನ್ನು ಹೆಚ್ಚಿಸುವುದಕ್ಕೋಸ್ಕರ ಶೋಷಿತ ಕೆಲಸಗಳಲ್ಲಿ ಆಕೆಯನ್ನು ತೊಡಗಿಸಲಾಯಿತು. ಕೈಗಾರಿಕಾ ಮೀನುಗಾರಿಕೆ ಕೂಡಾ ಬಡ ಮಹಿಳೆಯರ ಶ್ರಮದ ಮೇಲೆ ಅವಲಂಬಿತವಾಗಿರುವುದರಿಂದ ಈ ಶೋಷಣೆಗೆ ಮೂಲಭೂತವಾಗಿ ಸವಾಲು ಒಡ್ಡಲು ಹೊಸ ವಿವರಣೆಗಳು ಹಾಗೂ ಹೊಸ ರೀತಿಯ ಸಂಘಟನೆಯ ಅಗತ್ಯವಿದೆ. ಅದಕ್ಕಿಷ್ಟ ಬಂದ ಹಾಗೆ ಮಾಡುವುದಕ್ಕೆ ಬಂಡವಾಳವನ್ನು ಬಿಡುವುದಕ್ಕೆ ಆಗುವುದಿಲ್ಲ, ಲಾಭವೊಂದರ ಹೊರತಾಗಿರುವ ಇತರ ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳುವಂತೆ ಕಠಿಣವಾದ ನಿಯಂತ್ರಣಗಳಿಂದ ಬಂಡವಾಳದ ಮೇಲೆ ಒತ್ತಡ ಹೇರಬೇಕಾಗಿದೆ. ಆದಾಗ್ಯೂ ಅನುದಾನ ಸರ್ಕಾರೇತರ ಸಂಸ್ಥೆಗಳು ಸಮಾಧಾನಕರ ಅಥವಾ ಮಧ್ಯಸ್ಥಿಕೆಯ ಪಾತ್ರಗಳನ್ನು ನಿರ್ವಹಿಸುವುದಕ್ಕೆ ಒತ್ತಾಯಿಸುತ್ತಾ ಬಂಡವಾಳದ ಚೌಕಟ್ಟಿನ ಹೊರಗೆ ಉತ್ತರಗಳನ್ನು ಕಂಡುಕೊಳ್ಳಲು ವಿಫಲವಾಗಿವೆ.*

●

ಕಳೆದ ಕೆಲವು ದಶಕಗಳಲ್ಲಿ ಮೀನುಗಾರಿಕೆಯಲ್ಲಿ ಹಲವಾರು ಬದಲಾವಣೆಗಳಾಗಿವೆ. ಉತ್ತರದಲ್ಲಿ ಕೈಗಾರಿಕಾ ಮೀನುಗಾರಿಕೆ ಬಿದ್ದು ಹೋಗಿದ್ದರಿಂದ ಅದು ದಕ್ಷಿಣದ ವಿಶ್ವದ ಕಡೆಗೆ ತನ್ನ ಕೇಂದ್ರವನ್ನು ಬದಲಾಯಿಸಿತು. ಸಮುದ್ರದ ಸಂಪನ್ಮೂಲಗಳು ಅತಿಯಾಗಿ ಬಳಸಲ್ಪಟ್ಟದ್ದು ಈ ಹಂತದಲ್ಲಿಯೇ. ಮೀನು ಹಿಡಿಯುವ ಕ್ರಿಯೆಗಿಂತ ಮೀನು ಸಾಕಾಣಿಕೆಗೆ ಹೆಚ್ಚು ಮಹತ್ವ ದೊರೆತದ್ದು-ಈ ಬದಲಾವಣೆಗಳೊಂದಿಗೆ ಪ್ರಾರಂಭವಾದ ಸಂಶೋಧನೆ ಹಾಗೂ ದಾಖಲಾತಿ ಪ್ರಕ್ರಿಯೆಗಳು ಯೋಜನೆ, ಜಾರಿಯಲ್ಲಿರುವ ರೂಢಿಗಳು ಹಾಗೂ ಮೀನುಗಾರಿಕೆಯ ಕ್ಷೇತ್ರಕ್ಕೆ ಹರಿದು ಬರುವ ಸಂಪನ್ಮೂಲಗಳ ಮೇಲೆ ಪ್ರಭಾವವನ್ನು ಬೀರಿದವು.

ಅಭಿವೃದ್ಧಿ ಕುರಿತಾದ ಅನುದಾನದ ಇತಿಹಾಸದಲ್ಲಿ ಎರಡು ಮಹತ್ವವಾದ ಘಟನೆಗಳು ಕಳೆದ ಮೂರುದಶಕದಲ್ಲಿ ನಡೆದಿವೆ. 1980 ರಲ್ಲಿ ಪ್ರಾರಂಭವಾದ ಈ ಪ್ರಕ್ರಿಯೆಯ ಜೊತೆ ಜೊತೆಗೆಯೇ ವಾಷಿಂಗ್‌ಟನ್ ಒಪ್ಪಂದವಾಯಿತು. 2005ರ ಕೊನೆಯಲ್ಲಿ ಪ್ಯಾರಿಸ್ ಡಿಕ್ಲರೇಷನ್‌ನ ಕರಡು ಪ್ರತಿ ತಯಾರಾಗಿತ್ತು. ವಾಷಿಂಗ್‌ಟನ್ ಒಪ್ಪಂದದ ಪ್ರಕಾರ ನಿಯೋ ಲಿಬರಲ್ ಆರ್ಥಿಕ ಸುಧಾರಣೆಗಳ ಮೂಲಕ ಅಭಿವೃದ್ಧಿ ಮಾಡುವುದು ಮುಖ್ಯ ಅಂಶವಾಗಿತ್ತು. ಪ್ಯಾರಿಸ್ ಡಿಕ್ಲರೇಷನ್ನಿನ ಕರಡು ಪ್ರತಿಯಲ್ಲಿ ಒಳ್ಳೆಯ ಆಡಳಿತ ಮುಖ್ಯವಾದ ಅಂಶವಾಗಿ ಪ್ರತಿಪಾದಿತವಾಗಿ ಅನುದಾನದ ಮೇಲೆ ಅನೇಕ ಪರಿಣಾಮಗಳನ್ನು ಬೀರಿತು. ವಿಶ್ವಸಂಸ್ಥೆ ಹಾಗೂ ಅಂತರರಾಷ್ಟ್ರೀಯ ಮಾನಿಟರಿ ಫಂಡ್ ಸಂಸ್ಥೆಗಳು ವಾಷಿಂಗ್‌ಟನ್ ಒಪ್ಪಂದದ ಹಿನ್ನೆಲೆಯಲ್ಲಿಯೇ ಸಾಲದ ನಿಯಮಾವಳಿಗಳನ್ನು ಸಾಲಕೊಡುವ ದೇಶಗಳಿಗಾಗಿ ರೂಪಿಸಿತು. ಆರ್ಥಿಕ ಮರುರಚನೆಯ ಯೋಜನೆ, ಹಣಕಾಸು ಇದರ ಪ್ರಭಾವ ಎಲ್ಲಾ ದೇಶಗಳ ಅನುಭವಗಳಿಗೆ ಬರುವಂತಾಯಿತು. ಇದರಿಂದಾಗಿ ಮೀನುಗಾರಿಕೆಯ ಕ್ಷೇತ್ರದಲ್ಲಿ ರಫ್ತು ಹೆಚ್ಚಾಗಿ ಅಂತರರಾಷ್ಟ್ರೀಯ ವ್ಯಾಪಾರ-ವ್ಯವಹಾರದಲ್ಲಿ, ಗಡಿಯಾಚೆಯ ಬಂಡವಾಳ ತೊಡಗಿಸುವಿಕೆಯಲ್ಲಿ ನಿಯಮಾವಳಿಗಳು, ನಿಯಂತ್ರಣಗಳು ಇಲ್ಲವೆನ್ನುವಂತಾದವು. ಹೊಸ ಮಿಲೇನಿಯಂನ ಉದಯದ ನಂತರ ವಾಷಿಂಗ್ಟನ್ ಒಪ್ಪಂದದ ಹಿನ್ನೆಲೆಯಲ್ಲಿ ದಕ್ಷಿಣ ವಿಶ್ವದ ಆರ್ಥಿಕ ಮರುರಚನೆ ಹೆಚ್ಚು ಕಡಿಮೆ ಮುಗಿದಂತಾಗಿತ್ತು. ಎಲ್ಲಾ ಬಡ ದೇಶಗಳಲ್ಲಿ ಬಂಡವಾಳಶಾಹಿತ್ವದ ಸುಧಾರಣೆಗಳು ಜಾರಿಗೆ ಬಂದವು. ಹೊಸದಾಗಿ ಉದಯಿಸುತ್ತಿರುವ ಮಾರುಕಟ್ಟೆಯ ಆರ್ಥಿಕತೆಯ ಮೇಲೆ ಹಿಡಿತ ಸಾಧಿಸಲು ಕೈಗಾರಿಕೆಗಳು ತಮ್ಮ ಆದ್ಯತೆಗಳನ್ನು ಬುಡಮೇಲು ಮಾಡುವಂತಾಯಿತು. ಹಾಗಾಗಿ ಕಳೆದ ಹತ್ತು ವರ್ಷಗಳಲ್ಲಿ ಕೈಗಾರಿಕೆ ಎರಡು ಸಂಗತಿಗಳ ಮೇಲೆ ಒತ್ತಡ ಹೇರಿದೆ. ಮೊದಲನೆಯದಾಗಿ ಪರಿಸರ, ಶ್ರಮಕ್ಕೆ ಸಂಬಂಧಿಸಿದ ಅಳತೆಗೋಲುಗಳು ಕೈಗಾರಿಕೆಯ ಹಿತಾಸಕ್ತಿಗಳೊಡನೆ ಸೌಹಾರ್ದಗೊಳ್ಳಲು ಹಾಗೂ ಖಾಸಗಿ ನಿಯಂತ್ರಣದ ಮೇಲೆ ಕೈಗಾರಿಕೆ ಹಿಡಿತ ಸಾಧಿಸಲು ಒತ್ತಡ ಹೇರಿತು. ಎರಡನೆಯದಾಗಿ ಈ ಸುಧಾರಣೆಗಳ ಮೂಲಕ ತೊಂದರೆಗೆ ಸಿಲುಕುವ ಜನರು ನಾಶಗೊಳ್ಳಬಾರದೆಂಬ ಉದ್ದೇಶದಿಂದ ನಿರ್ದಿಷ್ಟ ಅನುದಾನಕ್ಕೆ ಅತ್ಯಂತ ಬಡ ಜನರು ಗುರಿಯಾಗುವಂತೆ ಒತ್ತಡ ಹೇರಲಾಯಿತು. ಖಾಸಗೀಕರಣ ಹಾಗೂ ನಿರ್ದಿಷ್ಟ ಅನುದಾನದ ಸಾಫಲ್ಯ ಒಳ್ಳೆಯ ಆಡಳಿತ ಹಾಗೂ ತಲುಪುವ ವಿಧಾನಗಳನ್ನು ಅವಲಂಬಿಸಿರುವುದರಿಂದ ಬಂಡವಾಳದ ಅಜೆಂಡಾ ಈಗ ಒಳ್ಳೆಯ ಆಡಳಿತಕ್ಕೆ ಹಸ್ತಾಂತರಗೊಂಡಿದೆ. ಹಾಗಾಗಿ ರಾಷ್ಟ್ರೀಯ ಗುರಿಗಳ ಜೊತೆಗೆ ಅನುದಾನದ ಸೌಹಾರ್ದತೆ 2005ರ ಪ್ಯಾರೀಸ್ ಡಿಕ್ಲರೇಷನ್‌ನ ಕೇಂದ್ರಬಿಂದುವಾಯಿತು. ಈ ಹಿನ್ನೆಲೆಯಲ್ಲಿ ಮೀನುಗಾರಿಕೆಯ ಮಹಿಳೆಯರ ಮುಖ್ಯ ಅಭಿವೃದ್ಧಿಗಳ ಕುರಿತ ಸಾಹಿತ್ಯವನ್ನು ಅವಲೋಕಿಸಬಹುದಾಗಿದೆ.



**ರಾಜಕೀಯ ಆರ್ಥಿಕತೆಯಿಂದ ರಾಜಕೀಯ ಪರಿಸರದ ಕಡೆಗೆ:**

ಮೀನುಗಾರಿಕೆಗೆ ಸಂಬಂಧಿಸಿದ ಮೊದಲಿನ ಅಧ್ಯಯನಗಳು ಮೀನುಗಾರರು ವಿಶ್ವದಾದ್ಯಂತ ಸಂಘಟಿತರಾಗಿ ಹೋರಾಡಿದ ಸಂದರ್ಭದಲ್ಲಿ ಹುಟ್ಟಿಕೊಂಡಂತಹವುಗಳು. ಉತ್ತರವಿಶ್ವದಲ್ಲಿ ಮೀನುಗಾರರ ಸಂತತಿನಾಶದ ಹಾಗೂ ಮೀನು ಉತ್ಪನ್ನಗಳು ದೊರಕುವುದು ಕಡಿಮೆಯಾಗುವುದರ ಬಗ್ಗೆ ಹೋರಾಟ ನಡೆದಿದ್ದರೆ, ದಕ್ಷಿಣದ ಕೆಲವು ಭಾಗಗಳಲ್ಲಿ ಮಹಿಳೆಯರ ಸಾರ್ವಜನಿಕ ಸಾರಿಗೆ, ಮಾರುಕಟ್ಟೆಯ ತೆರಿಗೆ ಕಡಿತಗೊಳಿಸುವ ಬಗ್ಗೆ ಹೋರಾಟ ನಡೆಸಿದ್ದಾರೆ. ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿಯೇ ಈವಿಚಾರಗಳು ಚರ್ಚಿತವಾಗಿದ್ದರೂ ಮಹಿಳೆಯರು ಮನೆಯ ಒಳಗೆ ಹಾಗೂ ಮನೆಯ ಹೊರಗೆ ಮಾಡುವ ಕೆಲಸವನ್ನು ಮಾರ್ಕ್ಸ್‌ವಾದ ಗಮನಿಸಲಿಲ್ಲ ಎಂದು ಅಧ್ಯಯನಗಳನ್ನು ಪ್ರಶ್ನೆ ಮಾಡಿದ್ದೂ ಇದೆ. ಬಲೆ ಬೀಸಿ ಹಿಡಿದ ಮೀನು ಪ್ರಾಸೆಸ್ ಆಗಿ ಮಾರಾಟವಾಗದಿದ್ದರೆ, ಮೀನುಗಾರರ ಕುಟುಂಬಗಳಿಗೆ ಆಹಾರ ಬಟ್ಟೆ ಹೊಂದಿಸದಿದ್ದರೆ, ಮೀನುಗಾರರು ಮನೆಗೆಲಸದ ಒತ್ತಡಗಳಿಂದ ಬಿಡುಗಡೆ ಹೊಂದಿ ಸಮುದ್ರಕ್ಕೆ ಮೀನು ಹಿಡಿಯಲು ಹೋಗಲು ಸ್ವತಂತ್ರರಾಗದಿದ್ದರೆ ಮೀನುಗಾರರ ಆರ್ಥಿಕತೆ ಕುಸಿದು ಬೀಳುತ್ತದೆ ಎಂಬುದು ಸ್ಪಷ್ಟವಾದ ವಿಚಾರ. ಮೀನು ಹಿಡಿಯುವ ಕೆಲಸ ಆರ್ಥಿಕ ಮೌಲ್ಯವುಳ್ಳ ಕೆಲಸವೆಂದು ಪರಿಗಣಿತವಾಗಿದ್ದರೆ, ಇತರೆ ಕೆಲಸಗಳು ಆರ್ಥಿಕ ವಲಯದ ಒಳಗೆ ಬರುವುದೇ ಇಲ್ಲ. ಕೆಲವು ಕೆಲಸಗಳಿಗೆ ಹಣವೇ ಇಲ್ಲ, ಇದ್ದರೂ ಅತ್ಯಂತ ನಿಕೃಷ್ಟ ಮಟ್ಟದಲ್ಲಿ ಇರುತ್ತವೆ. ಇದನ್ನು ಮೊದಲಿನ ಅಧ್ಯಯನಗಳು ಪಿತೃಪ್ರಧಾನ ಅಧಿಕಾರ ಸಂಬಂಧಗಳು ಹೇಗೆ ಮೀನುಗಾರರ ಸಮುದಾಯದಲ್ಲಿ ಕೆಲಸ ಮಾಡುತ್ತವೆ ಎಂದು ವಿವರಿಸಿದ್ದರು. ಲಿಂಗಾಧರಿತ ಶ್ರಮವಿಭಜನೆ, ಖಾಸಗಿ, ಸಾರ್ವಜನಿಕ ವಲಯದ ಮಧ್ಯದ ಬಿರುಕು, ಉತ್ಪಾದನೆ, ಮರು ಉತ್ಪಾದನೆ ಇಂತಹ ವಿವರಗಳಿಂದ ಮೀನುಗಾರರ ಸಮುದಾಯದ ಬಡ ಮಹಿಳೆಯರ ಬದುಕನ್ನು ಅಧ್ಯಯನ ಮಾಡಲಾಗಿತ್ತು.




ಖಾಸಗಿ ಹಾಗೂ ಸಾರ್ವಜನಿಕ ವಲಯದ ಮಧ್ಯದ ಬೇರ್ಪಡೆಯಿಂದಾಗಿ ಮುಖ್ಯ ಆರ್ಥಿಕತೆಗೆ ಕೆಲವು ವಿನಾಯಿತಿಗಳು ದೊರೆಯುವಂತಾಯಿತು. ಮಹಿಳೆ, ಮಕ್ಕಳ ಕೆಲಸ ಇವರಿಗೆ ದೊರೆತ ಮುಖ್ಯ ವಿನಾಯಿತಿ. ಸಾಂಪ್ರದಾಯಿಕ ಮೀನುಗಾರಿಕೆಯಲ್ಲಿ ಶ್ರಮವಿಭಜನೆಗೆ ಅನುಗುಣವಾಗಿ ಹೆಂಗಸರು ಮೀನು ಹಿಡಿಯುವುದನ್ನು ಬಿಟ್ಟು ಉಳಿದೆಲ್ಲ ಕೆಲಸ ಮಾಡುತ್ತಾ ಸಾಂಪ್ರದಾಯಿಕ ಮೀನುಗಾರಿಕೆಯ ಆರ್ಥಿಕತೆಗೆ ದೊಡ್ಡ ವಿನಾಯಿತಿ ದೊರಕಿಸಿಕೊಟ್ಟಿದ್ದಾರೆ. ಹಾಗಾಗಿ ಸಣ್ಣ ಪ್ರಮಾಣದ ಮೀನುಗಾರಿಕೆಯ ಸಮುದಾಯದ ಮೌನವನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಇವರು ಮುಖ್ಯ ಪಾತ್ರ ವಹಿಸುತ್ತಾರೆ. ಬಡ ದೇಶಗಳಲ್ಲಿ ಖಾಸಗಿ ವಲಯದಲ್ಲಿ ಮರು ಉತ್ಪಾದನೆಯ ಎಲ್ಲಾ ಜವಾಬ್ದಾರಿಗಳನ್ನು ತಾವೇ ಹೊರುವ ಮಹಿಳೆಯರ ಶ್ರಮದಿಂದ ಪ್ರಭುತ್ವಕ್ಕೆ ವಿನಾಯಿತಿ ದೊರಕಿದೆ. ದುಡಿಯುವ ಬಡ ಜನರ ಬಗೆಗಿನ ಎಲ್ಲಾ ಸಾಮಾಜಿಕ ಹೊಣೆಗಾರಿಕೆಯನ್ನು ಪ್ರಭುತ್ವ ತೊರೆದುಬಿಟ್ಟಿದೆ. ಕೈಗಾರಿಕಾ ಮೀನುಗಾರಿಕೆಯಲ್ಲಿ ಮಹಿಳೆಯರು ಕನಿಷ್ಠ ಕೂಲಿ ಪಡೆಯುವುದರಿಂದ ಅಗ್ಗದ ಶ್ರಮಜೀವಿಗಳಾಗಿ ನೇರವಾದ ವಿನಾಯಿತಿಯನ್ನು ದೊರಕಿಸಿಕೊಟ್ಟಿದ್ದಾರೆ. ಶ್ರಮ ಮಾರುಕಟ್ಟೆಯ ಫ್ಲೆಕ್ಸಿಬಿಲಿಟಿಗೆ ಬೇಡಿಕೆ ಹೆಚ್ಚಾಗುತ್ತಿದ್ದಂತೆ ಅಗ್ಗದ ಶ್ರಮ, ಕಡಿಮೆ ಸಂಬಳ, ಕನಿಷ್ಠ ಸೌಲಭ್ಯದ ಕೆಲಸದ ವಾತಾವರಣ, ದಿನಗೂಲಿಯಂತಹ ಸಂಗತಿಗಳು ಪ್ರಾಮುಖ್ಯ ಪಡೆದು, ಉದ್ಯೋಗವೇ ಹೆಣ್ಣುತನವನ್ನು ಪಡೆಯುವಂತಾಯಿತು. ದಕ್ಷಿಣ ವಿಶ್ವದ ಮೀನುಗಾರಿಕೆಯಲ್ಲಿ ಈ ರೀತಿಯ ಉದ್ಯೋಗದ ಅವಕಾಶಗಳು ಹೆಚ್ಚಾಗತೊಡಗಿದವು. ಬೇಕಾದಾಗ ಬಂಡವಾಳ ಬಳಸಿಕೊಳ್ಳಬಲ್ಲ, ಬೇಡವಾದಾಗ ಮನೆಗೆ ಹಿಂತಿರುಗಿ ಕಳಿಸಬಲ್ಲ ಕಾಯ್ದಿರಿಸಿದ ಶ್ರಮಜೀವಿಗಳಾಗಿಯೇ ಮಹಿಳೆಯರನ್ನು ಪರಿಗಣಿಸುವ ಪ್ರವೃತ್ತಿ ಹೆಚ್ಚಾಗತೊಡಗಿತು.

ರಾಜಕೀಯ ಆರ್ಥಿಕತೆಯ ಚೌಕಟ್ಟು ಮಾಡಿದ ವಿಚಾರಧಾರೆಯಲ್ಲಿ ಪರಿಸರದ ಬಗ್ಗೆ ಕಿಂಚಿತ್ತೂ ಗಮನವಿರಲಿಲ್ಲ. ಮೀನುಗಳು ನಾಶವಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಯಂತ್ರದ ಬಳಕೆಯೇ ವಿಮೋಚನೆಯ ದಾರಿ ಎಂದು ಹೊಸ ಯಂತ್ರಗಳ ಪರಿಷ್ಕರಣೆಯ ಕಡೆ ಮಾತ್ರ ಗಮನ ಹರಿಸುವುದು ಸಾಧ್ಯವಿಲ್ಲ. ಯಂತ್ರೋಪಕರಣ ಉಂಟುಮಾಡುತ್ತಿರುವ ಸಮಸ್ಯೆಗಳ ಕಡೆ ರಾಜಕೀಯ ಆರ್ಥಿಕ ಚೌಕಟ್ಟು ಗಮನಹರಿಸಲಿಲ್ಲ. ಕಳೆದ ಕೆಲವು ವರ್ಷಗಳಲ್ಲಿ ದಕ್ಷಿಣ ವಿಶ್ವದ ಬಡ ಮಹಿಳೆಯರು ತಮ್ಮ ಬದುಕುಳಿಯುವ ಪ್ರಯತ್ನಗಳಿಗಾಗಿ ಕಾಡಿನ ನಾಶದ ವಿರುದ್ಧ, ಸಮುದ್ರದ ವ್ಯಾಪಾರೀಕರಣದ ವಿರುದ್ಧ, ಕೈಗಾರಿಕಾ ವ್ಯವಸಾಯದ ವಿರುದ್ಧ, ವ್ಯಾಪಾರೀಕರಣದ ಬೀಜದ ವಿರುದ್ಧ ಹೋರಾಟಗಳನ್ನು ಪ್ರಾರಂಭಿಸಿದ್ದರಿಂದ ಹೊಸ ರೀತಿಯ ವಿಚಾರಧಾರೆಯ ಚೌಕಟ್ಟುಗಳು ಹುಟ್ಟಿಕೊಂಡವು. ನಾಶವಾಗುತ್ತಿರುವ ಪ್ರಕೃತಿ ಸಂಪನ್ಮೂಲಗಳ ಬಗ್ಗೆ ಕಾಳಜಿ ವಹಿಸಿದ ಈ ವಿಚಾರಧಾರೆಗಳ ಚೌಕಟ್ಟು ಉತ್ಪಾದನೆ, ಬಳಕೆಗಳ ಸಂಬಂಧವನ್ನು ಬಲವಾಗಿ ಪ್ರಶ್ನಿಸಿದವು. ಆದರೆ ಲಿಂಗಾಧರಿತ ಶ್ರಮವಿಭಜನೆಯ ಪ್ರಶ್ನೆ ಇವರಿಗೆ ಮುಖ್ಯವಾಗಲೇ ಇಲ್ಲ.

ಇಂದು ಸ್ತ್ರೀವಾದಿ ರಾಜಕೀಯ ಪರಿಸರದ ಚೌಕಟ್ಟು ಸಮುದಾಯದಲ್ಲಿ ಮಹಿಳೆಯರ ಪಾತ್ರ, ಮೀನುಗಾರಿಕೆಯಲ್ಲಿ ಅವರ ಶ್ರಮ, ಅವರ ಜ್ಞಾನ ಪರಂಪರೆಯನ್ನು ವಿವರಿಸಲು ಪ್ರಯತ್ನಿಸುತ್ತಿದೆ. ಮೀನುಗಾರರ ಒಟ್ಟು ಬದುಕಿನ ಹಿನ್ನೆಲೆಯಲ್ಲಿ ಮೀನುಗಾರರ ಆರ್ಥಿಕ, ಕುಟುಂಬ, ಸಾಮಾಜಿಕ ಪ್ರಶ್ನೆಗಳನ್ನು ವಿವರಿಸುವ ಅಗತ್ಯವನ್ನೂ ಹೇಳುತ್ತಿದೆ. ಬದುಕುಳಿಯಲು ಸಾಧ್ಯವಾಗದಂತಹ ಮೀನುಗಾರಿಕೆಯ ವ್ಯವಸ್ಥೆಯ ಜೊತೆಗೆ ಪರಿಸರ ಸಂರಕ್ಷಿಸಲಾಗದ ಅಭಿವೃದ್ಧಿಯನ್ನೂ ಸಹ ಸ್ತ್ರೀವಾದಿ ಪರಿಸರದ ಚೌಕಟ್ಟು ಪ್ರಶ್ನೆ ಮಾಡಿದೆ. ಆದರೆ ಮಹಿಳೆಯರ ಖಾಸಗಿ–ಸಾರ್ವಜನಿಕ ಸಮಸ್ಯೆಗಳನ್ನಾಗಲೀ, ಅವರ ಲಿಂಗಾಧರಿತ ಶ್ರಮ, ಕುಟುಂಬದ ಒಳಗೆ ಇರುವ ಪಿತೃಪ್ರಧಾನ ಅಂಶಗಳನ್ನು ಇವರು ಚರ್ಚಿಸುವುದಿಲ್ಲ. ರಾಜಕೀಯ ಆರ್ಥಿಕತೆಯ ಚೌಕಟ್ಟು ಪರಿಸರದ ಆಯಾಮವನ್ನು ಗಮನಕ್ಕೆ ತೆಗೆದುಕೊಂಡಿರದ ಹಾಗೆ ರಾಜಕೀಯ ಪರಿಸರ ಮೀನುಗಾರಿಕೆಯ ಮಹಿಳೆಯರ ಶ್ರಮವನ್ನು ಅದರ ವಿವರಣೆಯ ಚೌಕಟ್ಟಿಗೆ ತೆಗೆದುಕೊಂಡಿಲ್ಲ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ.

**ಶೋಷಣೆ ಹಾಗೂ ತುಳಿತದಿಂದ ಸಬಲೀಕರಣದ ಕಡೆಗೆ :**

ತುಳಿತವನ್ನು ಮಹಿಳಾ ಚಳವಳಿಗಳು ಪಿತೃಪ್ರಧಾನ ಮೌಲ್ಯಗಳಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿವೆ. ಇಲ್ಲಿನ ಅಧಿಕಾರ ಸಂಬಂಧಗಳು ಹೆಂಗಸಿನ ಶ್ರಮ, ಲೈಂಗಿಕತೆ, ಫಲವತ್ತತೆಯನ್ನು ಅನೇಕ ರೀತಿಯಲ್ಲಿ ಖಾಸಗಿ ಹಾಗೂ ಸಾರ್ವಜನಿಕ ವಲಯಗಳಲ್ಲಿ ಶೋಷಿಸುತ್ತವೆ. ಬಂಡವಾಳ ಆಕೆಯ ಶ್ರಮವನ್ನು ಕಸಿದುಕೊಳ್ಳುತ್ತದೆ ಎಂಬುದನ್ನು ಶೋಷಣೆ ಎಂದು ಅರ್ಥಮಾಡಿಕೊಳ್ಳಲಾಗಿದೆ. ಸಾಂಪ್ರದಾಯಿಕ ಮೀನುಗಾರಿಕೆಯ ಸಮುದಾಯ ಹಾಗೂ ಕುಟುಂಬದೊಳಗಿನ ಈಗಿರುವ ರಚನೆಗಳು ಮಹಿಳೆಯರ ಶ್ರಮದಿಂದ ಲಾಭವನ್ನು ಪಡೆಯುತ್ತಿರುವುದರಿಂದ ಹಿಂಸೆಯನ್ನು ಬಳಸಿಯಾದರೂ ಪಿತೃಪ್ರಧಾನ ಗಡಿಗಳನ್ನು ಅವರು ದಾಟದಿರುವಂತೆ ಒತ್ತಾಯ ಪಡಿಸಲಾಗುತ್ತದೆ. ಮನೆಗೆಲಸದಂತಹ ಆರ್ಥಿಕ ಮೌಲ್ಯವಿರದ ಕೆಲಸಗಳನ್ನು ಮಾಡಿದ ಮಹಿಳೆಯರು ಮಾರುಕಟ್ಟೆಯಲ್ಲಿ ಕೆಲಸಗಳನ್ನು ಅರಸಿದರೆ ಅವರಿಗೆ ಕೆಲಸ ಸಿಗುವುದು ಕಷ್ಟ ಎಂಬುದನ್ನು ಮೊದಲಿನ ಅಧ್ಯಯನಗಳು ತೋರಿಸುತ್ತವೆ. ಆದರೆ ಸಾಂಪ್ರದಾಯಿಕ ಮೀನುಗಾರಿಕೆ ಕೈಗಾರಿಕಾ ಮೀನುಗಾರಿಕೆಯಾಗಿ ಪರಿವರ್ತಿತವಾಗುವಾಗ ಪ್ರಭುತ್ವವು ಕುಟುಂಬದ ಒಳಗಿನ ಪಿತೃಪ್ರಧಾನ ಸ್ವರೂಪಗಳನ್ನು ಸಾಮಾಜಿಕ ಸ್ವರೂಪಗಳನ್ನಾಗಿ ಪರಿವರ್ತಿಸುತ್ತದೆ. ಮೀನುಗಾರ ಮಹಿಳೆಯರ ವಿಮೋಚನೆಯ ಪ್ರಶ್ನೆ

---

**ಹೆಣ್ಣೊಂದು ಮಾಯೆಯಲ್ಲ : ತಿಳಿಯಿರಿ ಜಗವೆಲ್ಲ**

ಬಂಡವಾಳಶಾಹಿತ್ವ ಸಮಾಜಕ್ಕೆ ಮುಳುವಾಗುವುದರಿಂದ ಪಿತೃಪ್ರಧಾನ ಹಾಗೂ ಇತರ ಮಹಿಳೆಯರ ಶೋಷಿತ ಅಧಿಕಾರ ಸಂಬಂಧಗಳ ಜೊತೆ ಕೈಮಿಲಾಯಿಸಿಕೊಂಡೇ ಪ್ರಭುತ್ವ ಮುಂದುವರೆಯತ್ತದೆ. 1979ರ ಹೊತ್ತಿಗೆ ಯುನೈಟೆಡ್ ನೇಷನ್ ಮಹಿಳೆಯರಿಗೆ ಸಂಬಂಧಿಸಿದ ಎಲ್ಲಾ ರೀತಿಯ ತಾರತಮ್ಯಗಳನ್ನು ಹೋಗಲಾಡಿಸುವ ಕನ್ವೆನ್ಷನ್ ತಂದದ್ದರಿಂದ ಮಹಿಳೆಯರಿಗೆ ಸಮಾನ ಅವಕಾಶಗಳು ದೊರೆಯಬಹುದೆಂಬುದು ಆಶಯವಾಗಿತ್ತು. ಆದರೆ ಶಿಕ್ಷಣ ಬಲ್ಲ, ಬಂಡವಾಳ ಹೊಂದಿದ ಮಹಿಳೆಯರಿಗೆ ಈ ರೀತಿಯ ಸಮಾನ ಅವಕಾಶಗಳು ದೊರೆತವೇ ಹೊರತು ಬಡ ಮಹಿಳೆಯರಿಗಲ್ಲ. ಬಡ ಮಹಿಳೆಯರ ಶ್ರಮದಿಂದ ಹೆಚ್ಚು ವಿನಾಯಿತಿ ಪಡೆಯುವ ಬಂಡವಾಳ ಈ ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ ಎಂದು ಭಾವಿಸುವುದು ಹಾಸ್ಯಾಸ್ಪದವಾಗುತ್ತದೆ. ಈ ಸಂದರ್ಭದಲ್ಲಿ ವಿಶ್ವಬ್ಯಾಂಕ್ ಹಾಗೂ ಅಂತರರಾಷ್ಟ್ರೀಯ ಮಾನಿಟರಿ ಫಂಡ್ ನಡುವೆ ರಾಚನಿಕ ಹೊಂದಾಣಿಕೆ ನಡೆದದ್ದರಿಂದ ಸಾಲ ಪಡೆಯುವ ಬಡ ದೇಶಗಳು ಮೂಲ ಸೌಲಭ್ಯಗಳನ್ನು ಖಾಸಗೀಕರಣ ಗೊಳಿಸುವುದು, ಮಾರುಕಟ್ಟೆ ಅನಿಯಂತ್ರಣಗೊಳಿಸುವುದು, ಪರಿಸರ ಹಾಗೂ ಸಮುದ್ರದ ತಡಿ ಪ್ರದೇಶಗಳ ಅನಿಯಂತ್ರಣಗೊಳಿಸುವುದು ಅನಿವಾರ್ಯವಾಯಿತು. ರಫ್ತು ಮಾದರಿಯ ಆರ್ಥಿಕ ವ್ಯವಸ್ಥೆಯನ್ನು ಬಲಗೊಳಿಸಲಾಯಿತು. ಸಾಂಪ್ರದಾಯಕ ಜೀವನಾಧಾರದ ಸಂಪನ್ಮೂಲಗಳು ನಾಶವಾಗುತ್ತಿರುವ ಹಿನ್ನೆಲೆಯಲ್ಲಿ ಬದುಕಿ ಉಳಿಯುವುದಕ್ಕೋಸ್ಕರ ಸಂಬಳ ತರುವ ಕೆಲಸಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಬಡ ಮಹಿಳೆಯರು ಸೇರುವಂತಾಯಿತು.

ಈ ಸಂದರ್ಭದಲ್ಲಿ ಮೀನುಗಾರಿಕೆಯ ಕ್ಷೇತ್ರದ ಅಧ್ಯಯನಗಳಲ್ಲಿ ಜೆಂಡರ್ ಎಂಬ ಪದವನ್ನು ಬಳಸಲಾಗಿದೆ. ಜೆಂಡರ್ ಎಂಬ ಪದದ ಬಳಕೆ ಸಾಮಾಜಿಕ ಪಾತ್ರ ವಿವರಿಸಲೋ, ಗಂಡು-ಹೆಣ್ಣಿನ ನಡುವಿನ ಸಂಬಂಧ ವಿವರಿಸಲೋ, ಸಮಾಜದಲ್ಲಿ ಸಂಹಿತೆ ರೂಪಿಸಲೋ, ಅವರ ಸ್ವಭಾವ, ಮೌಲ್ಯ, ವಿಧಾನಗಳನ್ನು ಸಂರಚಿಸಲೋ ಎಂಬಂತೆ ಬಳಸಲಾಗಿದೆ. ಒಂದು ಸಂದರ್ಭದಲ್ಲಿ ಐಹಿಕ ಅರ್ಥದಲ್ಲಿ, ಇನ್ನೊಮ್ಮೆ ವೈಚಾರಿಕ ಅರ್ಥದಲ್ಲಿ ಬಳಸಲಾಗಿದೆ. ಈ ಸಂದರ್ಭದಲ್ಲಿ ಬಳಸಲಾದ ಮಹಿಳಾ ಸಬಲೀಕರಣ ಆಕಸ್ಮಿಕವಾಗಿ ರೂಢಿಗೆ ಬಂದದ್ದಲ್ಲ. ಸಬಲೀಕರಣದ ಕಲ್ಪನೆ ಸಂಘರ್ಷವಿರದ ರಾಜಕೀಯದ ಜೊತೆ ತಳಕು ಹಾಕಿಕೊಂಡಿದೆ. ಉದಾರಿ ಪ್ರಭುತ್ವ, ಬೃಹತ್ ಆರ್ಥಿಕತೆ ನೀಡುವ ಪರಿಮಿತ ಸಂಪನ್ಮೂಲಗಳು, ನಿಯಮಗಳ ಅಡಿಯಲ್ಲಿ ಪುಟ್ಟದಾಗಿ, ಪುಟ್ಟಸಾಮಾಜಿಕ ಬದುಕಿನ ವಲಯವನ್ನು ಪ್ರಭಾವಿಸುವಷ್ಟರ ಮಟ್ಟಿಗೆ ಮಾತ್ರ ಮಹಿಳಾ ಸಬಲೀಕರಣದ ಅರ್ಥವ್ಯಾಪ್ತಿ ಇದೆ. ಹಾಗಾಗಿ ಬಂಡವಾಳಶಾಹಿಗಳ ಉತ್ಪಾದನೆಯ ಉದ್ಯೋಗಗಳಲ್ಲಿ ಸವಾಲುಗಳಿಲ್ಲದೇ ಮಹಿಳೆಯರನ್ನು ತೊಡಗಿಸುವುದಕ್ಕೆ ಮಹಿಳಾ ಸಬಲೀಕರಣ ದಾರಿಮಾಡಿಕೊಟ್ಟಿತು. ಇದರ ಜೊತೆಗೆ 1995ರಲ್ಲಿ ಬೀಜಿಂಗ್ ಸಮಾವೇಶ ದಿಂದ ಜನಪ್ರಿಯವಾದ 'ಮಹಿಳೆಯರನ್ನು ಮುಖ್ಯವಾಹಿನಿಗೆ ಸೇರಿಸುವ' ಕಲ್ಪನೆಯೂ ಸೇರಿಕೊಂಡು ಬಂಡವಾಳ, ವರ್ಗ, ಜನಾಂಗ, ಜಾತಿ, ಧರ್ಮ ಇವುಗಳ ಜೊತೆ ಸಂಘರ್ಷವಿಲ್ಲದೇ ಮಹಿಳೆಯರನ್ನು ಹೇಗೋ ಮುಖ್ಯ ವಾಹಿನಿಗೆ ತೊಡಗಿಸುವ ಪ್ರಯತ್ನಗಳು ನಡೆದವು, ಅವರು ಫಲಾನುಭವಿಗಳು ಆಗುವಂತೆ ಮಾಡಿ ಮಹಿಳಾ ಸಬಲೀಕರಣದ ವ್ಯಾಖ್ಯಾನ ಮಾಡಲಾಯಿತು.



ಇದೇ ಸಂದರ್ಭದಲ್ಲಿ ಪರಿಸರದ ಮೇಲಿನ ಒತ್ತು ಹೆಚ್ಚು ಇದ್ದುದರಿಂದ ಮಹಿಳಾ ಅಭಿವೃದ್ಧಿಯನ್ನು ಪರಿಸರದ ಕಲ್ಪನೆಯ ಜೊತೆಗೆ ಬೆಸೆದು ಸಂಭ್ರಮಿಸಲಾಯಿತು. ಮಹಿಳಾ ಸಬಲೀಕರಣಕ್ಕೆ ಭೂಮಿಯ ಮಾತೃತ್ವದ ಕಲ್ಪನೆ ಸೇರಿಕೊಂಡಿತು. ಅವರು ಸಹಜವಾಗಿಯೇ ಪ್ರಕೃತಿಗೆ ಹತ್ತಿರವಾದ್ದರಿಂದ ಪರಿಸರದ ಸಹಜ ರಕ್ಷಕರು ಎಂದು ಬಿಂಬಿಸಲಾಯಿತು. ಸಬಲೀಕರಣವೆಂದರೆ ಅವರ ಸಹಜ ಸಾಮರ್ಥ್ಯಗಳನ್ನು ಬೆಳಕಿಗೆ ತರುವುದು ಎನ್ನುವಂತಾಯಿತು. ಹಾಗಾಗಿ ಸಬಲೀಕರಣದ ತರಬೇತಿ ಕೊಡುವುದು, ಸಾಮರ್ಥ್ಯದ ತರಬೇತಿ, ಸಣ್ಣಪ್ರಮಾಣದ ಸಾಲ, ಸ್ತ್ರೀ ಶಕ್ತಿ ಸಂಘಗಳ ಅಭಿವೃದ್ಧಿ ಇಂತಹ ಪ್ರಯತ್ನಗಳಿಗೆ ಒತ್ತು ಕೊಡಲಾಯಿತು. ಮಹಿಳೆಯರ ಸಮಸ್ಯೆಗಳ ಮೂಲ ರಾಚನಿಕ ಹಾಗೂ ರಾಜಕೀಯ ಬೇರುಗಳಲ್ಲಿದೆ ಎಂಬುದರಿಂದ ಗಮನವನ್ನು ಬೇರೆ ಕಡೆಗೆ ತಿರುಗಿಸಲಾಯಿತು. ಮಹಿಳಾ ರಾಜಕೀಯವೆಂದರೆ ಹೋರಾಟ, ಹತ್ತಿಕ್ಕುವಿಕೆ ಅಲ್ಲ, ಒಪ್ಪಿಗೆ ಹಾಗೂ ಒಂದುಗೂಡುವಿಕೆ ಎಂಬುದನ್ನು ಪ್ರಭುತ್ವಗಳು ಯೋಜನೆಯ ಮೂಲಕ ಸಂಸ್ಥೀಕರಣಗೊಳಿಸಿದರೆ, ಅನುದಾನ ಇದನ್ನು ಬಲಪಡಿಸಿತು.

**ಹಕ್ಕುಗಳ ಆಧಾರಿತ ವಾದಗಳ ಬೆಳವಣಿಗೆ:**

ವಿಶ್ವದ ಉತ್ತರಭಾಗದಲ್ಲಿ ಕೈಗಾರಿಕಾ ಮೀನುಗಾರಿಕೆಯಿಂದ ನಡೆದ ಅತಿ ಹೆಚ್ಚು ಮೀನುಗಾರಿಕೆ ಸೃಷ್ಟಿ ಮಾಡಿದ ಇಕ್ಕಟ್ಟು ಎರಡು ರೀತಿಯ ಹಕ್ಕುಗಳ ಆಧಾರಿತ ವಾದಕ್ಕೆ ಎಡೆ ಮಾಡಿಕೊಟ್ಟಿದೆ. ಮೀನುಗಾರಿಕೆಯ ಮ್ಯಾನೇಜರ್ಸ್ ಯಾರು ಬೇಕಾದರೂ ಮೀನು ಹಿಡಿಯುವುದನ್ನು ನಿರ್ಬಂಧಿಸಲು ಮೀನುಗಾರಿಕೆಯಲ್ಲಿ ಖಾಸಗಿ ಆಸ್ತಿಯ ಹಕ್ಕುಗಳನ್ನು ಎತ್ತಿ ಹಿಡಿಯುತ್ತಿದ್ದರೆ, ಸಣ್ಣ ಪ್ರಮಾಣದ ಮೀನುಗಾರಿಕೆಯ ಸಮುದಾಯಗಳು ಮಾನವ ಹಕ್ಕುಗಳ ಚೌಕಟ್ಟಿನಲ್ಲಿ ಖಾಸಗೀಕರಣವನ್ನು ವಿರೋಧಿಸಲು ಪ್ರಯತ್ನಿಸುತ್ತಿವೆ. ರಾಷ್ಟ್ರೀಯ ಆಸ್ತಿಯಾಗಿದ್ದ ಸಮುದ್ರದ ಮೀನು 1984ರಲ್ಲಿ ಹಾಗೂ 1991ರಲ್ಲಿ ಜಾರಿಗೆ ಬಂದ ಕೋಟಾ-ವೈಯಕ್ತಿಕ ಹಾಗೂ ವರ್ಗಾಯಿಸಲ್ಪಡುವ ವೈಯಕ್ತಿಕ ಕೋಟಾ ವ್ಯವಸ್ಥೆಯಿಂದಾಗಿ ಖಾಸಗೀಕರಣದ ಪ್ರಕ್ರಿಯೆಯನ್ನು ಮೀನುಗಾರಿಕೆಯಲ್ಲಿ ಬಲಪಡಿಸಲಾಯಿತು. ಉತ್ತರ ವಿಶ್ವದಲ್ಲಿ ನಿರಂತರವಾಗಿ ಮೀನುಗಾರಿಕೆ ಕುಸಿತ ಕಂಡಿದ್ದರಿಂದ ಉದ್ಯೋಗದ ಪರಿಣಿತಿ ಮಾರುಕಟ್ಟೆಯ ಬೇಡಿಕೆಯಾಗಿ ಸೃಷ್ಟಿಯಾಯಿತು. ಈ ಹಂತದಲ್ಲಿ ಮೀನುಗಾರಿಕೆಯ ಮಹಿಳೆಯರು ಇನ್ನೂ ಮೂಲೆ ಗುಂಪಾಗುವಂತಾಯಿತು. ನಿಯಂತ್ರಣ ಪ್ರಭುತ್ವದ ಕೈ ದಾಟಿ ಮಾರುಕಟ್ಟೆಗೆ ಲಭಿಸುವಂತಾಯಿತು. ಹಣವಂತರ ಕೈ ಸೇರಿದ ಮೀನುಗಾರಿಕೆಯ ವ್ಯವಹಾರ ತಜ್ಞರ ಮೀಮಾಂಸೆ ಮೀನುಗಾರಿಕೆಯಿಂದ ಸಂಪನ್ಮೂಲ ಬಾಡಿಗೆಯನ್ನೂ ಪಡೆಯ ಲಾರಂಭಿಸಿತು.

ಈ ಹಂತದಲ್ಲಿಯೇ ಸಣ್ಣ ಪ್ರಮಾಣದ ಮೀನುಗಾರಿಕೆಯ ಸಮುದಾಯಗಳು ಮೀನುಗಾರಿಕೆಯು ತಮ್ಮ ಸಮುದಾಯದ ಹಕ್ಕು

ಎಂಬುದನ್ನು ಮಾನವ ಹಕ್ಕುಗಳ ಚೌಕಟ್ಟಿನಲ್ಲಿ ವಾದಿಸುತ್ತವೆ. ಇದು ಎಷ್ಟರಮಟ್ಟಿಗೆ ಖಾಸಗೀಕರಣವನ್ನು ಸವಾಲು ಮಾಡಬಹುದು ಎಂಬುದು ಒಂದು ಪ್ರಶ್ನೆಯಾದರೆ, ಈ ಮಾನವೀಯ ಚೌಕಟ್ಟು ಮಹಿಳಾ ಮೀನುಗಾರರ ಪ್ರಶ್ನೆಗಳನ್ನು ಸರಿಯಾದ ರೀತಿಯಲ್ಲಿ ಒಳಗೊಳ್ಳುತ್ತದೆಯೇ ಎಂಬುದು ಇನ್ನೊಂದು ಪ್ರಶ್ನೆಯಾಗುತ್ತದೆ. ಮಾನವ ಹಕ್ಕುಗಳ ಮೂಲಕ ಸಂಪನ್ಮೂಲ ಹಾಗೂ ಭೂಮಿಯ ಬಗ್ಗೆ ಸಾಂಘಿಕ ಒಡೆತನಕ್ಕೆ ಬೇಡಿಕೆ ಇತ್ತರೆ, ವೈಯಕ್ತಿಕ ಆಸ್ತಿಯ ಹಕ್ಕುಗಳ ಜೊತೆ ಸಂಘರ್ಷವಾದರೆ ಅದು ಪರಿಹಾರವಾಗುವ ಬಗೆ ಹೇಗೆ? ಸಮುದಾಯದಲ್ಲಿಯೇ ಅತ್ಯಂತ ತಳ ಸಮುದಾಯವಾಗಿರುವ ಮಹಿಳೆಯರಿಗೂ ಮೀನುಗಾರಿಕೆಯ ಹಕ್ಕು ಲಭ್ಯವಾಗುತ್ತದೆ ಎಂಬುದನ್ನು ಮಾನವ ಹಕ್ಕಿನ ಚೌಕಟ್ಟು ಸ್ಪಷ್ಟ ಪಡಿಸುತ್ತದೆಯೇ? ಈ ಹಕ್ಕು ಅವರಿಗೆ ಭದ್ರತೆ ನೀಡುತ್ತದೆಯೇ? ಈ ರೀತಿಯ ಬೇಡಿಕೆ ಸಮುದಾಯದ ಒಳಗಡೆ ವರ್ಗಗಳನ್ನು ಸೃಷ್ಟಿಸುವುದಕ್ಕೆ ಕಾರಣವಾಗುವುದಿಲ್ಲವೇ? ಆಗೊಮ್ಮೆ-ಈಗೊಮ್ಮೆ ಮೀನುಗಾರಿಕೆ ಮಾಡುವ ಅತ್ಯಂತ ಬಡವರಿಗೆ ಈ ಬೇಡಿಕೆ ಸಹಾಯವಾಗುತ್ತದೆಯೇ? ಸಾರ್ವಜನಿಕ ವಲಯವನ್ನು ಮಾತ್ರ ಮಾನವೀಯ ಚೌಕಟ್ಟು ಗಮನಿಸುವುದರಿಂದ, ಖಾಸಗಿ ವಲಯದ ಬದುಕನ್ನು ಸಂಪೂರ್ಣವಾಗಿ ನಿರ್ಲಕ್ಷಿಸುತ್ತದೆ. ಹಾಗಾಗಿ ಮಹಿಳೆಯರ ಶೋಷಣೆಯನ್ನು ಈ ದೃಷ್ಟಿಕೋನ ಗಮನಕ್ಕೇ ತೆಗೆದುಕೊಳ್ಳುವುದಿಲ್ಲ.

**ಸಮುದಾಯದ ಕಲ್ಪನೆಯ ಬೆಳವಣಿಗೆ :**

ಸಮುದಾಯದ ಕಲ್ಪನೆ ಹುಟ್ಟಿದ್ದು ಎರೆಡು ಸಂದರ್ಭಗಳಲ್ಲಿ, ಎರೆಡು ವಿಭಿನ್ನ ಕಾರಣಗಳಲ್ಲಿ. ಅಭಿವೃದ್ಧಿಯಿಂದ ತೊಂದರೆ ಅನುಭವಿಸಿದ, ಸಂಪನ್ಮೂಲಗಳನಾಶ, ಸ್ಥಳಾಂತರದ ಸಮಸ್ಯೆಗಳಲ್ಲಿ ರಾಜಕೀಯ ಹೋರಾಟಕ್ಕೆ ತೊಡಗಿದ ಮೀನುಗಾರರು ಸಮುದಾಯ ವಾಗಿ ರಾಜಕೀಯವಾಗಿ ರೂಪುಗೊಂಡದ್ದು. ಎರಡನೆಯದಾಗಿ ಸಾಂಸ್ಥಿಕ ಸ್ವರೂಪವಾಗಿ ಹಾಗೂ ವಿಶ್ವಯೋಜನೆಯ ಪ್ರತಿಫಲನವಾಗಿ ಸಮುದಾಯ ರೂಪುಗೊಂಡು ಹೋರಾಟಗಳಿಗೆ ಸ್ಪಂದಿಸಿದ ಪ್ರಕ್ರಿಯೆ. ಇವೆರೆಡೂ ವಿಭಿನ್ನವಾಗಿದ್ದಾಗ್ಯೂ ಕೂಡಾ ಅನುದಾನದ ಪ್ರಕ್ರಿಯೆ ಇವೆರೆಡನ್ನೂ ಒಂದೇ ಆಗಿ ಕಾಣುವಂತೆ ಮಾಡುತ್ತವೆ. ಐತಿಹಾಸಿಕವಾಗಿ ಮೀನುಗಾರ ಸಮುದಾಯದ ಹಕ್ಕುಗಳು ಪ್ರತಿಭಟನೆ ತೋರುವ ರಾಜಕೀಯದಲ್ಲಿ ವ್ಯಕ್ತಗೊಂಡಿದ್ದವು. ಆದರೆ 1980ರ ನಂತರ ಸಾಂಸ್ಥಿಕ ಸ್ವರೂಪದಿಂದ ವಿಶ್ವ ಯೋಜನೆಯ ಮುಖವಾದ ಸಮುದಾಯ ಎಲ್ಲವನ್ನೂ ಒಪ್ಪಿಕೊಳ್ಳುವ ಹಂತವನ್ನು ತಲುಪಿತು. ಇವರೂ ಕೂಡಾ ಮೀನುಗಾರಿಕೆಯ ಅಭಿವೃದ್ಧಿ ಪಥದಲ್ಲಿ ಒಬ್ಬ ಬಾಧ್ಯಸ್ಥರಾದರಷ್ಟೆ.

ಪ್ರಭುತ್ವ ಹಿಂದಕ್ಕೆ ಸರಿದುಕೊಳ್ಳುತ್ತಿರುವ ಹಿನ್ನಲೆಯಲ್ಲಿ ಕೈಗಾರಿಕೆ ಸಾಮಾಜಿಕ ವಲಯದಲ್ಲಿ ಹೊಸ ರೀತಿಯ ಖಾಸಗಿ ಭಾಗವಹಿಸುವಿಕೆ ಯನ್ನು ನಿರ್ವಹಿಸಬೇಕಾಗುತ್ತದೆ. ನಿಯಂತ್ರಣ, ದುರಂತ ಸಂಭವಿಸಿದಾಗ ನೀಡುವ ಪರಿಹಾರ ಇಂತಹ ಸರ್ಕಾರ ಮಾಡುತ್ತಿದ್ದ ಅನೇಕ ಕಾರ್ಯ ಗಳನ್ನು ಖಾಸಗಿ ವಲಯದ ಸಂಸ್ಥೆಗಳು ನಿರ್ವಹಿಸ ಲಾರಂಭಿಸಿದವು. ಸರ್ಕಾರೇತರ ಸಂಸ್ಥೆಗಳು ಇಂತಹ ಕಡೆ ಭಾಗವಹಿಸಲಾರಂಭಿಸಿದವು. ಇವರ ಭಾಗವಹಿಸುವಿಕೆಯಿಂದ ಮಾರುಕಟ್ಟೆಗೆ ಸಂಬಂಧಿಸಿದ ಯೋಜನೆಗಳು ರಾಷ್ಟ್ರೀಯ ಹಾಗೂ ನಾಗರಿಕ ಸಮಾಜದ ಒಪ್ಪಿತ ಮುದ್ರೆಯನ್ನು ಪಡೆಯಲಾರಂಭಿಸಿದವು. ಈ ಕಾರಣದಿಂದಾಗಿ ಸರ್ಕಾರೇತರ ಸಂಸ್ಥೆಗಳು ತಮಗಿದ್ದ ಸಣ್ಣ ವಿರೋಧದ ಧ್ವನಿ, ಪಾತ್ರವನ್ನು ಬಂಡವಾಳ ಸಮಾಜಕ್ಕೆ ಒಪ್ಪಿಸುವಂತಹ ಒತ್ತಡಕ್ಕೆ ಒಳಗಾಗಿ, ಪ್ರಧಾನ ವಿಚಾರಧಾರೆ ಜೊತೆಗೆ ಕೈಗೂಡಿಸುವಂತಾಯಿತು.



1990ರಲ್ಲಿ ಸಮುದಾಯದಲ್ಲಿ ಐಡೆಂಟಿಟಿ ರಾಜಕೀಯ ಬೆಳೆದುದು ಮತ್ತೊಂದು ಮುಖ್ಯ ಸಂಗತಿ. ಪ್ರಭುತ್ವದ ನೆರವಿನಿಂದ ಮೀನುಗಾರಿಕೆ ಯಲ್ಲಿ ಬಂಡವಾಳ ಪ್ರವೇಶಿಸಿದ ಹಿಂಸಾತ್ಮಕ ರೀತಿಯಿಂದಾಗಿ ವಿಶ್ವದ ದಕ್ಷಿಣ ಭಾಗದ ಮೀನುಗಾರರು ಸಾಂಪ್ರದಾಯಿಕವಾಗಿದ್ದ ತಮ್ಮ ಜೀವನಾಧಾರಿತ ಆಧಾರಗಳನ್ನು ಕಳೆದುಕೊಳ್ಳುವಂತಾಯಿತು. ಹಾಗಾಗಿ ಅಭಿವೃದ್ಧಿಯಲ್ಲಿ ಪಾಲು ಪಡೆಯಲು ಹೋರಾಟ ನಡೆಸಲೇಬೇಕಾದಾಗ ಸ್ಪರ್ಧಾತ್ಮಕ ರಾಜಕೀಯದ ಸನ್ನಿವೇಶದಲ್ಲಿ ಸಮುದಾಯದ ಐಡೆಂಟಿಟಿ ಬಲವಾಗಿ ಬೆಳೆಯಿತು. ಕೇರಳದಲ್ಲಿ ಮೀನುಗಾರಿಕೆಯ ಜಾತಿಯಲ್ಲಿ ಹುಟ್ಟಿದವರಿಗೆ ಮಾತ್ರ ಮೀನಿನ ಸಂಪನ್ಮೂಲ ಹೊಂದಲು ಜಾತಿ ಪತ್ರವನ್ನು ನವೀಕರಿಸುವ ಸೌಲಭ್ಯ ಇದೆ. ಹೀಗೆ ಸಮುದಾಯದ ಐಡೆಂಟಿಟಿಯು ಬಲವಾಗಿ ಬೆಳೆಯುತ್ತಿರುವ ಹಾಗೆಯೇ ಮಹಿಳೆಯರ ಪಾತ್ರದ ಬಗ್ಗೆ ಸ್ಪಷ್ಟ ನಿಲುವುಗಳೂ ಮೂಡತೊಡಗಿದವು. ಮಹಿಳೆಯರ ಹಕ್ಕುಗಳನ್ನು ಸಮುದಾಯದ ಹಕ್ಕು ಎಂದೇ ಪರಿಗಣಿಸಲಾಯಿತು. ವಿಶ್ವದ ಉತ್ತರ ಹಾಗೂ ದಕ್ಷಿಣಭಾಗದಲ್ಲಿ ಪ್ರಭುತ್ವದ ಯೋಜನೆಗಳಿಂದಾಗಿ ಕೈಗಾರಿಕಾ ಮೀನುಗಾರಿಕೆ ಹೆಚ್ಚಾಗುತ್ತಿರುವ ಸಂದರ್ಭದಲ್ಲಿ ಸಣ್ಣ ಪ್ರಮಾಣದ ಮೀನುಗಾರರು ತಮ್ಮ ಬದುಕಿನ ಕ್ರಮವನ್ನೇ ಬದಲಾಯಿಸ ಬೇಕಾದ ಪರಿಸ್ಥಿತಿಯಲ್ಲಿ ಮಹಿಳೆ ಹಾಗೂ ಪುರುಷರನ್ನು ಪ್ರತ್ಯೇಕಿಸಿ ಮೀನುಗಾರಿಕೆಯ ಕ್ಷೇತ್ರವನ್ನು ದುರ್ಬಲಗೊಳಿಸುವುದು ಸರಿಯಲ್ಲ ಎಂದು ಪ್ರಪಂಚದ ಮೀನುಗಾರಿಕೆ ವೇದಿಕೆಯವರು ಅಭಿಪ್ರಾಯ ಪಡುತ್ತಾರೆ. ದಶಕಗಳ ಹಿಂದೆ ಎಡಪಕ್ಷ ಈ ನಿಲುವನ್ನೇ ಹೊಂದಿತ್ತು. ಮಹಿಳಾ ಚಳವಳಿ ಮಹಿಳೆಯರನ್ನು ಸ್ವಾಯತ್ತವಾಗಿ ಸಂಘಟಿಸುವ ಮೂಲಕ ಕಾರ್ಮಿಕರ ಒಗ್ಗಟ್ಟನ್ನು ಮುರಿಯತ್ತದೆ ಎಂಬುದು ಎಡಪಕ್ಷಗಳ ಆರೋಪವಾಗಿತ್ತು. ಸಮುದಾಯವನ್ನು ಮೂಲಭೂತವಾಗಿ ಪ್ರಶ್ನೆ ಮಾಡಲಾಗದ ಹಿನ್ನಲೆಯಲ್ಲಿ ಸಮುದಾಯದ ಸಾಂಸ್ಕೃತಿಕ ಐಡೆಂಟಿಟಿ, ಘನತೆಯನ್ನು ಎತ್ತಿ ಹಿಡಿಯಬೇಕೆನ್ನುವ ಮೌಲ್ಯಗಳು ಮಹಿಳೆಯರ, ಬಡವರ, ಲೈಂಗಿಕ ಅಲ್ಪಸಂಖ್ಯಾತರ ಮೇಲೆ ಅತ್ಯಂತ ಮಾರಕವಾದ ಪ್ರಭಾವವನ್ನು ಬೀರುತ್ತದೆ.

ಇತ್ತೀಚೆಗೆ ಮೀನುಗಾರಿಕೆಯ ಕ್ಷೇತ್ರದಲ್ಲಿ ನಡೆಯುತ್ತಿರುವ ಹಲವಾರು ಆರ್ಥಿಕ ಸುಧಾರಣೆಗಳು ಮಹಿಳೆಯರಿಗೆ ವಿಭಿನ್ನವಾದ ಕೆಲಸಗಳ ಅವಕಾಶವನ್ನು ಒದಗಿಸುತ್ತಿರುವುದರಿಂದ ಅವರಲ್ಲಿ ವಿಭಿನ್ನ ಅನುಭವ ಗಳನ್ನು ಉಂಟುಮಾಡಿವೆ. ಕೆಲವರಿಗೆ ತಮ್ಮ ಶೋಷಿತ ಸಂಪ್ರದಾಯದ ಪಾತ್ರದಿಂದ ಬಿಡುಗಡೆಯಾದ ಅನುಭವವಾದರೆ, ಇನ್ನು ಕೆಲವರಿಗೆ ದುಡಿಮೆ ಘನತೆ ಒದಗಿಸಿಕೊಡುವ ಅಂಶವಾಗಿ ಭಾಸವಾಗಿದೆ. ಈ

**ಹೆಣ್ಣಿಗೆ ಬೇಡ ಥಳಕು - ಬಳಕು : ಬೇಕವಳಿಗೆ ವಿಜ್ಞಾನದ ಬೆಳಕು**



ಅವಕಾಶಗಳಿಂದಾಗಿ ತಾರತಮ್ಯದ ಮನೋಭಾವವು ಕಡಿಮೆಯಾಗಿದೆ ಎಂಬುದು ಇನ್ನು ಹಲವರ ಅನಿಸಿಕೆ. ಆದರೂ ದುಡಿತ ಹಾಗೂ ಮನೆಗೆಲಸ ಇವರ ಹೊರೆಯನ್ನು ಹೆಚ್ಚಿಸಿರುವುದು ಸ್ಪಷ್ಟವಾಗಿದೆ. ಸರ್ಕಾರೇತರ ಸಂಸ್ಥೆಗಳ ಮಧ್ಯಸ್ಥಿಕೆಯಿಂದಾಗಿ ಮೀನುಗಾರಿಕೆಯ ಮಹಿಳೆಯರ ಹಕ್ಕುಗಳನ್ನು ಗುರುತಿಸುವ ಕೆಲಸಗಳೂ ನಡೆಯುತ್ತಿವೆ. ಹಾಗಾಗಿ ಸಮುದಾಯಗಳು ಅನಿವಾರ್ಯವಾಗಿ ಮಹಿಳೆಯರನ್ನು ಸಮುದಾಯದ ರಚನೆಯ ಭಾಗವಾಗಿ ಮಾತ್ರವಲ್ಲ, ಅವರನ್ನು ವ್ಯಕ್ತಿಗಳಾಗಿಯೂ ಗುರುತಿಸಬೇಕಾಗಿದೆ. ಇಂತಹ ಸಂದರ್ಭದಲ್ಲಿ ಮಹಿಳೆಯರ ಹಕ್ಕುಗಳು–ಧರ್ಮ, ಜಾತಿ, ಜನಾಂಗ, ವರ್ಗದಿಂದ ರೂಪಿತಗೊಂಡ ಸಮುದಾಯದ ರಚನೆಗಳ ಜೊತೆ ಹೇಗೆ ರಾಜಿ ಮಾಡಿಕೊಳ್ಳಬಲ್ಲವು ಎಂಬುದು ಪ್ರಶ್ನೆಯಾಗುತ್ತದೆ.

**ಅನುದಾನದ ಮೇಲೆ ಹೆಚ್ಚಾಗುತ್ತಿರುವ ಅವಲಂಬನೆ :**

ಜಾಗತೀಕರಣ ಹಾಗೂ ಮುಕ್ತ ವ್ಯಾಪಾರ, ವ್ಯವಹಾರವನ್ನು ಎಲ್ಲಾ ಕಡೆ ಹರಡುವಲ್ಲಿ ಅನುದಾನ ಮುಖ್ಯವಾದ ಪಾತ್ರವನ್ನು ವಹಿಸಿದೆ. ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಮಾನಿಟರಿ ಫಂಡ್ ಹಾಗೂ ವಿಶ್ವ ವ್ಯಾಪಾರ ಸಂಸ್ಥೆ ಈ ಮೂರೂ ವಿಶ್ವದ ಆರ್ಥಿಕತೆಯನ್ನು ಆಳಬಲ್ಲ ಏಕರೂಪದ ಸಂಸ್ಥೆಯಾಗಿ ರೂಪುಗೊಂಡಿವೆ. ಮೀನುಗಾರಿಕೆಯಲ್ಲಿ ಅನುದಾನದ ನಿಯಮಾವಳಿಗಳು ಆಧುನಿಕತೆ ಹಾಗೂ ಕೈಗಾರಿಕೆಯನ್ನು ಪ್ರೋತ್ಸಾಹಿಸುವುದರಿಂದ ವಿನಾಶಕಾರಿಯಾದ ಅಭಿವೃದ್ಧಿ ಮಾದರಿಯನ್ನು ದಕ್ಷಿಣವಿಶ್ವದ ಮೀನುಗಾರಿಕೆಯಲ್ಲಿ ಕಾಣಬಹುದಾಗಿದೆ. ರಫ್ತು ವ್ಯಾಪಾರ ಇಂದು ಮೀನುಗಾರಿಕೆಯ ಆರ್ಥಿಕ ಕೇಂದ್ರಬಿಂದುವಾಗಿದೆ. ಆದರೆ ವಿಶ್ವದ ಮಟ್ಟದಲ್ಲಿ ನಡೆಯುತ್ತಿರುವ ರಫ್ತು ವ್ಯಾಪಾರ ಅಸಮತೋಲನ ಮಟ್ಟದಲ್ಲಿ ಇರುವುದರಿಂದ ಚೈನಾ ಹಾಗೂ ಭಾರತದಂತಹ ರಾಷ್ಟ್ರದ ಆರ್ಥಿಕತೆಗಳು ಬರುವ ವರ್ಷಗಳಲ್ಲಿ ಮೀನುಗಳನ್ನು ಆಮದು ಮಾಡಿಕೊಳ್ಳವಂತಹ ಪರಿಸ್ಥಿತಿ ಉದ್ಭವವಾಗುತ್ತದೆ.

ಮೀನುಗಾರಿಕೆಯಲ್ಲಿ ಅನುದಾನ ಸಂಸ್ಥೆಗಳು ಎರೆಡು ಹಂತದಲ್ಲಿ ಬಂಡವಾಳದ ಪರವಾಗಿ ಕೆಲಸ ಮಾಡಿವೆ. ಮೊದಲನೆಯ ಹಂತದಲ್ಲಿ ಬಂಡವಾಳದ ತೊಡಗಿಸುವಿಕೆಗೆ ಬೇಕಾಗುವ ರಾಜಕೀಯವಾಗಿ ಒಪ್ಪಿಗೆಯಾಗುವಂತಹ ದಾರಿಯನ್ನು ನಿರ್ಮಿಸಿದ್ದು. ಎರಡನೆಯ ಹಂತದಲ್ಲಿ, ಅನುದಾನ ಸಂಸ್ಥೆಗಳು ಖಾಸಗೀಕರಣದ ವಾಹನಗಳಾದವು. ಮೊದಲು ಮೀನುಗಾರಿಕೆಗೆ ಅನುದಾನವನ್ನು ರಾಷ್ಟೀಯ ಸರ್ಕಾರಗಳೇ ಮಾಡುತ್ತಿದ್ದವು. ಆದರೆ ಸಾಲದ ಹೊರೆ ಹೆಚ್ಚಾಗುತ್ತಿದ್ದ ಹಾಗೆ ಬಂಡವಾಳ ಇಲ್ಲಿ ಪ್ರವೇಶ ಪಡೆಯಿತು. 1980 ರಲ್ಲಿ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಮಾನಿಟರಿ ಫಂಡ್ ಹಾಗೂ ಅಮೇರಿಕ ರೂಪಿಸಿದ ವಾಷಿಂಗ್ಟನ್ ಕಾನ್‌ಸೆಸ್ ಬಂಡವಾಳದ ತೊಡಗಿಸುವಿಕೆಗೆ ಇರುವ ಸರ್ಕಾರಿ ನಿಯಮಾವಳಿ, ನಿಯಂತ್ರಣ ಗಳನ್ನು ತೆಗೆದು ಹಾಕಿದವು. ಜೊತೆಗೆ ವ್ಯಾಪಾರ ಉದ್ದಿಮೆಗಳನ್ನು ಉದಾರೀಕರಣಗೊಳಿಸುವ, ಖಾಸಗೀಕರಣ ಪ್ರಕ್ರಿಯೆಯನ್ನು ಚುರುಕುಗೊಳಿಸುವಂತೆ ಸರ್ಕಾರಗಳನ್ನು ಪ್ರಭಾವಗೊಳಿಸಿದವು. ಈ ರೀತಿಯಾಗಿ ಎರಡನೆಯ ಹಂತದಲ್ಲಿ ಅನುದಾನ ಸಂಸ್ಥೆಗಳು ಖಾಸಗೀಕರಣ ಬಲಗೊಳ್ಳುವುದಕ್ಕೆ ದಾರಮಾಡಿಕೊಟ್ಟವು.

ಮೀನುಗಾರಿಕೆಗೆ ಸಂಬಂಧಿಸಿದ ಎಲ್ಲಾ ಪ್ರಾಜೆಕ್ಟ್ ಯೋಜನೆ ಗಳಲ್ಲಿ ಮಹಿಳಾ ಸಬಲೀಕರಣ ಹಾಗೂ ಮಹಿಳೆಯರನ್ನು ಮುಖ್ಯವಾಹಿನಿಗೆ ತರುವ ವಿಚಾರ ಇದ್ದೇ ಇರುತ್ತದೆ. ಬಂಡವಾಳದ ತೊಡಗಿಸುವಿಕೆಯನ್ನು ಹಸಿರುಗೊಳಿಸುವುದು ಇದರ ಉದ್ದೇಶವಾಗಿತ್ತು. ರಾಷ್ಟ್ರೀಯ ಪರಿಸರದ ಯೋಜನೆ ಗಳನ್ನೂ ಸಹ ಇದರಲ್ಲಿ ಹೊಂದಿಸಿಕೊಳ್ಳಲಾಗಿದೆ. ಪರಿಸರದ ಕೆಲಸ ಮಾಡುವ ಸರ್ಕಾರೇತರ ಸಂಸ್ಥೆಗಳು ಮೀನು, ಸಮುದ್ರ ತಡಿ, ಕಾಡು, ಗಣಿ, ವ್ಯವಸಾಯದ ಸಂರಕ್ಷಣೆಗಾಗಿ ಸಾಲ ಬಯಸಿ ಯೋಜನೆ ತಯಾರಿಸಿದರು. ಮೀನುಗಾರಿಕೆಯಲ್ಲಿ ಸಹ ನಿರ್ವಹಣೆ, ಸಮುದ್ರದ ಸಂಪನ್ಮೂಲಗಳನ್ನು ಸಮುದಾಯವನ್ನೊಳಗೊಂಡಂತೆ ನಿರ್ವಹಿಸುವುದು ಇಂತಹ ವಿಚಾರಗಳು ಅಸ್ತಿತ್ವಕ್ಕೆ ಬಂದವು. ಸಮುದಾಯದ ನೈಪುಣ್ಯ ಹೆಚ್ಚಿಸುವ, ಸದಸ್ಯರನ್ನು ಸಮರ್ಥರನ್ನಾಗಿಸುವ ತರಬೇತಿ ಕಾರ್ಯಕ್ರಮ ಗಳಿಗೆ ಧನಸಹಾಯ ಹರಿದು ಬರತೊಡಗಿತು. ಸ್ಥಳೀಯ ಸಮುದಾಯ ದವರೊಡನೆ, ಸಂಪನ್ಮೂಲಗಳನ್ನು ಹೊಂದಿದ ಗುಂಪುಗಳೊಡನೆ ನೇರವಾಗಿ ಕೆಲಸ ಮಾಡುವವರಿಗೆ ಸಹ ಈ ರೀತಿಯ ಅನುದಾನ ದೊರಕಿದೆ. ಈ ಹಂತದಲ್ಲಿಯೇ ವಿಶ್ವದಲ್ಲಿ ಆದಾಯದ ಅಸಮತೋಲನ ಗಳು ಕಂದರಗಳನ್ನು ತೋಡತೊಡಗಿದವು. ಆಹಾರ, ಇಂಧನದ ಬೆಲೆಗಳು ವಿಪರೀತ ಹೆಚ್ಚಾಗತೊಡಗಿವೆ. ಜೀವನಾಧಾರ ಕಳೆದುಕೊಳ್ಳುತ್ತಿರುವವರ ಸಂಖ್ಯೆ ಹೆಚ್ಚಾಗಿ ರಾಜಕೀಯ ಪ್ರಕ್ಷುಬ್ಧತೆ ಉಂಟಾಗುತ್ತಿದೆ. ಆದರೆ ಬಂಡವಾಳ ಮಾತ್ರ ಹೊಸದಾಗಿ ಹುಟ್ಟಿಕೊಳ್ಳುತ್ತಿರುವ ಮಾರುಕಟ್ಟೆಗಳ ಮೇಲೆ ತನ್ನ ನಿಯಂತ್ರಣವನ್ನು ಕ್ರೋಢೀಕರಿಸಲು ಪ್ರಯತ್ನಿಸುತ್ತಿದೆ.

**ಖಾಸಗೀಕರಣ ಹಾಗೂ ಅನುದಾನದ ಗುರಿ :**

ಕಳೆದ ಹತ್ತಾರು ವರ್ಷಗಳಲ್ಲಿ ಬಂಡವಾಳ ಎರೆಡು ವಿಚಾರಗಳ ಮೇಲೆ ಒತ್ತಡ ಹೇರಿದೆ. ಕೈಗಾರಿಕೆಗೆ ಅನುಕೂಲವಾಗುವಂತಹ ನಿಯಮಗಳಿಗಾಗಿ ಖಾಸಗೀಕರಣದ ನಿಯಂತ್ರಣ. ಎರಡನೆಯದಾಗಿ ವಿಶ್ವ ಬಂಡವಾಳಶಾಹಿತ್ವದ ದುರಂತಗಳನ್ನು ಕಡಿಮೆ ಮಾಡಲು ಅನುದಾನವನ್ನು ಗುರಿ ಮಾಡುವುದು. ಈ ಎರೆಡೂ ಜಯಪ್ರದ ವಾಗುವುದು ಸಮರ್ಥ ನಿರ್ವಹಣೆ ಹಾಗೂ ತಲುಪಿಸುವ ಕ್ರಮದಿಂದ ಎಂಬುದನ್ನು ಅರಿತುಕೊಂಡ ಬಂಡವಾಳದ ಗಮನ ಈಗ ಒಳ್ಳೆಯ ನಿರ್ವಹಣೆಯ ಕಡೆಗೆ ಹರಿದಿದೆ. ಅನುದಾನ ರಾಷ್ಟ್ರೀಯ ಆದ್ಯತೆಗಳ ಜೊತೆ ಬೆಸುಗೆ ಹೊಂದಿರಬೇಕೆನ್ನುವ 2005ರ ಪ್ಯಾರೀಸ್ ಡಿಕ್ಲರೇಷನ್‌ನ ಮುಖ್ಯ ಅಂಶವನ್ನು ಎಲ್ಲಾ ರಾಷ್ಟ್ರ ಸರ್ಕಾರಗಳೂ ಹಾಗೂ ಅನುದಾನ ಸಂಸ್ಥೆಗಳೂ ಒಪ್ಪಿಕೊಂಡಿವೆ. ಈ ಹಿನ್ನಲೆಯಲ್ಲಿಯೇ ವಿಶ್ವದ ಯೋಜನೆ ಗಳನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಉದಾ: ಮಿಲೇನಿಯಮ್ ಅಭಿವೃದ್ಧಿ ಗುರಿಗಳು. ಹೀಗೆ ನಿರ್ವಹಣೆಯನ್ನು ಮಾರುಕಟ್ಟೆಯ ಹಂತಕ್ಕೆ

ತಂದು ನಿಲ್ಲಿಸಿರುವುದರಿಂದ ಬಡವರ ನಡುವಿರುವ ಭಿನ್ನತೆ, ವಿಭಾಗಗಳು ಇನ್ನೂ ಹೆಚ್ಚಾಗುವ ಸಾಧ್ಯತೆಗಳು ಇವೆ. ಈ ಸನ್ನಿವೇಶದಲ್ಲಿ ಸಮುದಾಯ ಗಳು ಐಡೆಂಟಿಟಿ ರಾಜಕೀಯಕ್ಕೆ ಹೆಚ್ಚು ಹೆಚ್ಚು ಶರಣಾಗುತ್ತವೆ. ಮೀನುಗಾರರ ಸಮುದಾಯ ಇದರಿಂದ ಹೊರತಾಗಿಲ್ಲ.

ಕಳೆದ ಕೆಲವು ದಶಕಗಳಲ್ಲಿ ಕೈಗಾರಿಕಾ ಮೀನುಗಾರಿಕೆ ಬೃಹತ್ ಮಟ್ಟದಲ್ಲಿ ಬೆಳೆದು ಆರ್ಥಿಕ ಸಂಬಂಧಗಳನ್ನು ಮರುರಚನೆ ಮಾಡಿದೆ. ಇಂದು ಮೀನು ಬಡವರಿಂದ ತಯಾರಾಗಿ ಶ್ರೀಮಂತರು ಇದರ ಗ್ರಾಹಕರಾಗಿದ್ದಾರೆ. ಪರಿಸರದ ಪ್ರಜ್ಞೆಯು ವಿಶ್ವದಾದ್ಯಂತ ಆದ್ಯತೆ ಪಡೆದಿರುವುದರಿಂದ ಶ್ರಮ, ಉಳಿಕೆಯ ಮೌಲ್ಯದ ಕಲ್ಪನೆಗಳು ಪರಿಸರದ ಕಲ್ಪನೆಗೆ ದಾರಿ ಮಾಡಿಕೊಟ್ಟಿವೆ. ಬಡವರು, ಮೂಲೆಗುಂಪಾದ ಜನರು ಇಂದು ಶೋಷಿತ ಜನಾಂಗವಾಗಿ ಕಾಣುವ ಬದಲು ಪರಿಸರದ ಸಹಜ ರಕ್ಷಕರಾಗಿ ಕಂಡುಬರುತ್ತಿದ್ದಾರೆ. ಈಗ ವರ್ಗ ಹೋರಾಟದಿಂದ ಪರಿಸರದ ಉಳಿಯುವಿಕೆಯ ಕಡೆಗೆ ಹೋರಾಟ ನಡೆಯುತ್ತಿರುವುದು ಅಭಿವೃದ್ಧಿಯ ಮಾದರಿಯನ್ನು ಸೂಚಿಸುತ್ತದೆ. ವರ್ಗದ ದೃಷ್ಟಿಕೋನವನ್ನು ಬಿಟ್ಟುಕೊಟ್ಟಿರುವ ಇಂದಿನ ರಾಜಕೀಯ ಹೊಸದಾದ ರಾಜಕೀಯ ಸಮ್ಮತಿಗೆ ದಾರಿಮಾಡಿಕೊಟ್ಟಿದೆ. ಸರ್ಕಾರೇತರ ಸಂಸ್ಥೆಗಳು ಸ್ವಲ್ಪಮಟ್ಟಿನ ವಿರೋಧ ತೋರಿಸಬಲ್ಲವು ಅಥವಾ ಬಂಡವಾಳದ ಅಭಿವೃದ್ಧಿ ಮಾದರಿಯನ್ನು ಹಾಗೆಯೇ ಒಪ್ಪಿಕೊಂಡು ಬಿಡಬಲ್ಲವು. ಕಾರ್ಮಿಕರ ಶ್ರಮ ಕುರಿತಂತೆ ಸರ್ಕಾರೇತರ ಸಂಸ್ಥೆಗಳ ಪಾತ್ರ ಕಾರ್ಮಿಕನ ಉಳಿಯುವಿಕೆಗೆ ಸಂಬಂಧಿಸಿದಂತೆ ಮಾತ್ರ ಕೆಲಸ ಮಾಡಬಹುದಾಗಿದೆ. ಇನ್ನೂ ಹೆಚ್ಚಿನ ಸಮಾನತೆಗೆ ನ್ಯಾಯಕ್ಕೆ ಧ್ವನಿ ಎತ್ತಿ ಮಾತನಾಡಬಲ್ಲ, ಬೇಡಿಕೆ ಇಡಬಲ್ಲ, ರಾಜಕೀಯವಾಗಿ ಪ್ರಭಾವ ಹೊಂದಿರುವ ಕಾರ್ಮಿಕ ಶಕ್ತಿಯ ಅಗತ್ಯ ಇದೆ. ಈ ಪ್ರಶ್ನೆ ಚರ್ಚೆಯಾಗದೇ ಉಳಿದಿದೆ. ಮೀನುಗಾರ ಮಹಿಳೆಯರ ಶ್ರಮ ಅಗಾಧ ಪ್ರಮಾಣದಲ್ಲಿ ಸಂಘಟಿತವಾಗಿದ್ದಲ್ಲದೇ ಮೀನುಗಾರಿಕೆಯ ಆರ್ಥಿಕತೆಯನ್ನು ಹೆಚ್ಚಿಸುವುದಕ್ಕೋಸ್ಕರ ಶೋಷಿತ (Exploitative) ಕೆಲಸಗಳಲ್ಲಿ ಆಕೆಯನ್ನು ತೊಡಗಿಸಲಾಯಿತು. ಕೈಗಾರಿಕಾ ಮೀನುಗಾರಿಕೆ ಬಡ ಮಹಿಳೆಯರ ಶ್ರಮದ ಮೇಲೆ ಅವಲಂಬಿತವಾಗಿರುವುದರಿಂದ ಈ ಶೋಷಣೆಗೆ ಮೂಲಭೂತವಾಗಿ ಸವಾಲು ಒಡ್ಡಲು ಹೊಸ ವಿವರಣೆಗಳು, ಹೊಸ ರೀತಿಯ ಸಂಘಟನೆಯ ಅಗತ್ಯವಿದೆ. ಅದಕ್ಕಿಷ್ಟ ಬಂದ ಹಾಗೆ ಬಂಡವಾಳವನ್ನು ಬಿಡುವುದಕ್ಕೆ ಆಗುವುದಿಲ್ಲ. ಲಾಭವೊಂದರ ಹೊರತಾಗಿರುವ ಇತರ ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳುವಂತೆ ಬಂಡವಾಳದ ಮೇಲೆ ಕಠಿಣವಾದ ನಿಯಂತ್ರಣಗಳಿಂದ ಒತ್ತಡ ಹೇರಬೇಕಾಗಿದೆ. ಆದರೆ ಅನುದಾನ ಸರ್ಕಾರೇತರ ಸಂಸ್ಥೆಗಳು ಸಮಾಧಾನಕರ ಅಥವಾ ಮಧ್ಯಸ್ಥಿಕೆಯ ಪಾತ್ರಗಳನ್ನು ನಿರ್ವಹಿಸುವುದಕ್ಕೆ ಒತ್ತಾಯಿಸುತ್ತಾ ಬಂಡವಾಳದ ಚೌಕಟ್ಟಿನ ಹೊರಗೆ ಉತ್ತರಗಳನ್ನು ಕಂಡುಕೊಳ್ಳಲು ವಿಫಲವಾಗಿವೆ.

ಸಮುದಾಯವನ್ನು ಸಂಘಟಿಸುವ ವಿಧಾನಗಳು ಇಂದು ಬಹಳ ಸವಾಲುಗಳನ್ನು ಎದುರಿಸುತ್ತವೆ. ಸಮುದಾಯಗಳು ಬಂಡವಾಳಶಾಹಿ ಗಳಿಗೆ ಹೊರತಾದ ಅವರದೇ ಆದ ಮಾರುಕಟ್ಟೆಯ ವಿಧಾನಗಳನ್ನು ಹಣವಿರದ ಆರ್ಥಿಕತೆಯಲ್ಲಿ ರೂಪಿಸುವುದು ಸಾಧ್ಯವಾಗುತ್ತದೆಯೇ? ಬಂಡವಾಳದ ಹಾಗೂ ಜನರು ಮತ್ತು ಪರಿಸರದ ಜೊತೆಗಿನ ಅದರ ಸಂಬಂಧದ ನಿಯಂತ್ರಣಕ್ಕೆ ಅವರು ಒತ್ತಾಯಿಸುತ್ತಾರೆಯೇ? ಆಸ್ತಿಯ ಹಾಗೂ ಉತ್ಪಾದನಾ ವಿಧಾನಗಳನ್ನು ಅವರು ಸಾಂಘಿಕ ಒಡೆತನಕ್ಕೆ ತಂದು ಶ್ರಮಿಕರ ಹಕ್ಕುಗಳನ್ನು ರಕ್ಷಿಸುತ್ತಾ, ಲಾಭಕೋರರ ಲಾಭವನ್ನು ಕಾನೂನುಬಾಹಿರವೆಂದು ತಿರಸ್ಕರಿಸಬಲ್ಲರೇ? ಮೀನುಗಾರಿಕೆ ಮಾಡದ ಬಡವರ ಸಮಸ್ಯೆಗಳಿಗೆ ಇವರು ಸ್ಪಂದಿಸಬಲ್ಲರೇ? ಮನೆಗೆಲಸ ಸಾಂಘಿಕ ಕೆಲಸವಾಗಬಹುದೇ? ಮಹಿಳೆಯರ ಎಲ್ಲಾ ಶ್ರಮ ಗುರುತಿಸಲ್ಪಟ್ಟು ಮೌಲ್ಯ ಪಡೆಯಬಹುದೇ? ಮೀನುಗಾರಿಕೆಯ ಕಾರ್ಮಿಕರ ಹೋರಾಟ ಬರಿಯ ಬದುಕಿ ಉಳಿಯುವ ಸಮಸ್ಯೆಯನ್ನು ದಾಟಿ ಮುಂದೆ ಹೋಗಿ ಹೆಚ್ಚಿನ ಸಮಾನತೆ ಹಾಗೂ ನ್ಯಾಯ ಕೇಳುವ ರಾಜಕೀಯ ಅಧಿಕಾರ ಹೊಂದಿದ ಕಾರ್ಮಿಕ ಶಕ್ತಿಯ ಅಗತ್ಯವನ್ನು ಕುರಿತು ಮಾತನಾಡ ಬಹುದೇ? ಮಹಿಳೆಯರ ಫಲವತ್ತತೆ ಹಾಗೂ ಲೈಂಗಿಕತೆ ಕುಟುಂಬ ಹಾಗೂ ವೈಯಕ್ತಿಕ ಆಸ್ತಿಯ ಸಂಸ್ಥೆಗಳಿಂದ ಬಿಡುಗಡೆ ಹೊಂದಬಹುದೇ? ಇಂತಹ ಅಜೆಂಡಾಗಳಿಗೆ ಅಗತ್ಯವಾದ ರಾಜಕೀಯ ಹಾಗೂ ವಿವರಣಾತ್ಮಕ ಸ್ಪಷ್ಟತೆ ಐಡೆಂಟಿಟಿ ಆಧಾರಿತ ರಾಜಕೀಯದಿಂದ ಮಾತ್ರ ಬರಲು ಸಾಧ್ಯವೇ? ಹಾಗೆಯೇ ಐಡೆಂಟಿಟಿ ಆಧಾರಿತ ರಾಜಕೀಯ ಯಾವಾಗಲಾದರೂ ಪಿತೃಪ್ರಾಧಾನ್ಯತೆದ ವಿರುದ್ಧದ ಹೋರಾಟವನ್ನು ಸಹಿಸಿಕೊಳ್ಳುತ್ತದೆಯೇ? ವರ್ಗದ ಜೊತೆಗೆ ಶೋಷಣೆ ಹಾಗೂ ಹತ್ತಿಕ್ಕುವಿಕೆಯ ರಚನೆಗಳಾದ ಪಿತೃಪ್ರಧಾನತೆ, ಜನಾಂಗ, ಜಾತಿ, ಲೈಂಗಿಕತೆಯ ಮೇಲೆ ಮತ್ತೆ ಗಮನ ಕೇಂದ್ರೀಕರಿಸುವುದು ಅಗತ್ಯವಲ್ಲವೇ? ಜೆಂಡರ್ ರಾಜಕೀಯವನ್ನು ಮತ್ತೆ ಮೂಲಭೂತವಾಗಿ revision ಮಾಡುವುದು ನಮ್ಮ ಕಾಲದ ಅತ್ಯಗತ್ಯ ಜರೂರಿಯವಲ್ಲವೇ?

*(ನೀಲಾಂಜನ ಬಿಸ್ವಾಸ್‌ರವರ ಈ ಲೇಖನ ಡಿಸೆಂಬರ್ 17, 2011ರ Economic & Political weeklyಯಲ್ಲಿ ಪ್ರಕಟಗೊಂಡಿದೆ. ಆಧಾರ ಪುಸ್ತಕಗಳ ಪಟ್ಟಿಯನ್ನು ಸ್ಥಳಾಭಾವದ ಕಾರಣದಿಂದ ಇಲ್ಲಿ ಪ್ರಕಟಿಸಿರುವುದಿಲ್ಲ. ಅಂಕಿ–ಅಂಶಗಳ ಕೆಲವು ವಿಚಾರಗಳನ್ನೂ ಅನುವಾದದಲ್ಲಿ ಕೈ ಬಿಡಲಾಗಿದೆ. – ಚಂಪಾ)*

❑



# ಹೆಚ್.ಐ.ವಿ / ಏಡ್ಸ್ ಬಾಧಿತ ಮಹಿಳೆಯರ ಕರುಳ ಕೇಂದ್ರದ ಉರಿಚಿಂತನೆ

■ ಟಿ.ಎನ್.ಅನಿತ

## ಮೈಸೂರು ಜಿಲ್ಲೆಯ ಟಿ. ನರಸೀಪುರ ಹಾಗೂ ನಂಜನಗೂಡು ತಾಲ್ಲೂಕಿನ HIV/AIDS ಬಾಧಿತ ಪುರುಷರು

ಈ ವಿಷಯದ ಬಗ್ಗೆ ಸಂಶೋಧನೆ ನಡೆಸುತ್ತಿದ್ದೇನೆ ಎಂದು ಸಂದರ್ಶನಕ್ಕೂ ಮುಂಚಿತವಾಗಿ ವಿವರಣೆ ನೀಡುವಾಗಲೇ 'ಇವೆಲ್ಲನೂ ಏನಂತ ಸಂಶೋಧನೆ ಮಾಡ್ತೀರಾ ನೀವು, ವಿವಾಹ ಬೇರೆ ಆಗಿಲ್ಲಾ ಅಂತೀರಾ. ಇದರ ಬಗ್ಗೆ ನಾವು ಹೇಳೋದೆಲ್ಲಾ ನಿಮಗೇನು ಅರ್ಥವಾಗುತ್ತೇ' ಎಂದು 12ಕ್ಕೂ ಹೆಚ್ಚು ಹೆಚ್.ಐ.ವಿ./ಬಾಧಿತ ಪುರುಷರು ಹೇಳಿದರು. 'ಈ ಸೋಂಕು ನಿಮಗೆ ಹೇಗೆ ಬಂದಿತು?' ಎಂಬ ಪ್ರಶ್ನೆಗೆ 4 ವ್ಯಕ್ತಿಗಳನ್ನು ಹೊರತಾಗಿ ಉಳಿದೆಲ್ಲಾ ಪ್ರಕರಣಗಳು 'ಲೈಂಗಿಕ ಸಂಬಂಧವಿತ್ತು. ಪರಿಣಾಮವಾಗಿ ಹೆಚ್.ಐ.ವಿ. ಸೋಂಕು ಹರಡಿತು' ಎಂದು ಯಾವುದೇ ಹಿಂಜರಿಕೆ ಇಲ್ಲದೆ ಒಪ್ಪಿಕೊಂಡರು. ಅದನ್ನು ಹೇಳುವಾಗಲೂ ಸಹ ಅವರು ತಡವರಿಸಲಿಲ್ಲ. ಹಿಂಜರಿಯಲಿಲ್ಲ. ತಾವು ಮಾಡುತ್ತಿರುವುದು ಸಾಮಾಜಿಕವಾಗಿ ನೈತಿಕತೆಗೆ ವಿರುದ್ಧವಾದುದು ಎಂಬ ವಿಷಯ ತಿಳಿದಿದ್ದರೂ ಸಹ ನಮ್ಮದೇ ಸಮಾಜ, ನಮ್ಮದೇ ಸಂಸ್ಕೃತಿ ಎಂಬ ನಿರ್ಧಾರವನ್ನು ಮಾಡಿರುವವರಂತೆ ಅವರ ಮಾತುಗಳು ಹೊರಬರುತ್ತಿದ್ದವು.

ನಿಮ್ಮ ಪತ್ನಿಯ ಬಗ್ಗೆ ಏನು ಹೇಳುತ್ತೀರಿ? ಎಂಬ ಪ್ರಶ್ನೆಗೆ ಶೇ. 90ರಷ್ಟು ಪುರುಷರು 'ಅವಳ ಬಗ್ಗೆ ಏನು ಹೇಳುವುದು? ನಾವು ತಂದು ಹಾಕ್ತೀವಿ. ಅವಳು ಮಾಡಿ ಹಾಕ್ತಾಳೆ' ಎಂಬ ನೀರಸ ಉತ್ತರವನ್ನು ನೀಡಿದರು. 'ನನಗೆ ಸ್ವಲ್ಪ ಕೋಪ ಜಾಸ್ತಿ. ಅದಕ್ಕೆ ನನ್ನನ್ನು ಪ್ರಶ್ನೆ ಮಾಡಲು ಹೆದರುತ್ತಾಳೆ' ಎಂದು ಹೆಮ್ಮೆ ಪಟ್ಟುಕೊಂಡವರ ಸಂಖ್ಯೆ ಶೇ. 80. ಮುಕ್ತ ಲೈಂಗಿಕ ಸಂಬಂಧ ಹೊಂದಿದ್ದರಿಂದ ಸೋಂಕು ಬಂದಿತು ಎಂದು ಉತ್ತರಿಸಿದವರಿಗೆ 'ನಿಮ್ಮ ಪತ್ನಿಯೂ ಸಹ ನೀವು ಮಾಡಿದಂತಹ ಕೆಲಸವನ್ನು ಮಾಡಿದರೆ ಏನು ಮಾಡುತ್ತೀರಿ?' ಎಂಬ ಪ್ರಶ್ನೆ ಕೇಳಲಾಯಿತು. ಪ್ರತೀ ವ್ಯಕ್ತಿಯ ಮುಖದಲ್ಲೂ ಆವೇಶ, ಪತ್ನಿಯನ್ನು ಹತ್ಯೆ ಮಾಡುವಷ್ಟು ಕೋಪ ಮೂಡಿ ಬಂದಿತು. 'ನಾವು ಗಂಡಸರು. ಏನು ಮಾಡಿದರೂ ನಡೆಯುತ್ತದೆ. ಹಾಗಂತ ಮಹಿಳೆಯರು ಅಂತಹ ಕೆಲಸಕ್ಕೆ ಇಳಿದರೆ ಕುಟುಂಬದ ಮರ್ಯಾದೆ ಏನಾಗಬೇಕು. ಸಮಾಜದ ಗೌರವ ಏನಾಗಬೇಕು. ಹಾಗೇನಾದರೂ ಮಾಡಿದರೆ ನಮ್ಮ ಪಾಲಿಗೆ ಅವಳು ಸತ್ತ ಹಾಗೆ ಎಂದು ತಿಳಿದು ಅವಳ ತವರು ಮನೆಗೆ ಕಳುಹಿಸಿ ಬಿಡುತ್ತೇವೆ. ಅವರ ಅಪ್ಪ-ಅವ್ವ ಸರಿಯಾಗಿ ಬುದ್ಧಿ ಕಲಿಸಿದ್ದರೆ ಅವಳ್ಯಾಕೆ ಹಾಗೆ ಆಗುತ್ತಾಳೆ ಹೇಳಿ' ಎಂಬ ಉತ್ತರಗಳನ್ನು ಶೇ. 100 ರಷ್ಟು ಮಂದಿ ನೀಡಿದರು.

ಈ ಮೇಲೆ ಹೇಳಲಾಗಿರುವ ಎಲ್ಲಾ ಉತ್ತರಗಳು ಪುರುಷ ಪ್ರಾಧಾನ್ಯಕ್ಕೆ ಹಿಡಿದ ಕೈಗನ್ನಡಿಯಾಗಿವೆ. ಪುರುಷ ಏನು ಮಾಡಿದರೂ ಅದನ್ನು ಮಹಿಳೆ ಸಹಿಸಿಕೊಳ್ಳಬೇಕು, ಅದೇ ಕೆಲಸವನ್ನು ಮಹಿಳೆ ಮಾಡುವಂತಿಲ್ಲ. ಮಾಡಿದರೆ ಅವಳನ್ನು ಸಮಾಜವನ್ನು ಕಳಂಕಗೊಳಿಸುವ, ಕುಟುಂಬಕ್ಕೆ ಅಗೌರವ ತರುವ, ಸಂಸ್ಕೃತಿಗೆ ಮಸಿ ಬಳಿಯುವ ವ್ಯಕ್ತಿ ಎಂದು ತೀರ್ಮಾನಿಸಿ ಅವಳ ಸ್ವ ಸ್ಥಳವಾದ ತವರು ಮನೆಗೆ ಕಳುಹಿಸಿ ಬಿಡುವ ಹುನ್ನಾರ ನಡೆಸುತ್ತಾರೆ. ಇಷ್ಟಕ್ಕೇ ಸುಮ್ಮನಾಗದೇ ಮತ್ತೊಂದು ವಿವಾಹದ ಬಗ್ಗೆಯೂ ಚಿಂತನೆ ನಡೆಸುತ್ತಾರೆ. ಇಂತಹ ವಿಷಯದಲ್ಲಿ ಅವಳಿಗೆ ಒಂದು ಅವಕಾಶವನ್ನೂ ನೀಡದಷ್ಟು ಪುರುಷ ಪ್ರಾಧಾನ್ಯದ ನಿಯಂತ್ರಣ ನಮ್ಮ ಸಮಾಜದಲ್ಲಿದೆ. ಆದರೆ ಪುರುಷನಿಗೆ ಅವಕಾಶ ಎಂಬ ಪದವೇ ಅನ್ವಯವಾಗುವುದಿಲ್ಲ. ಮಹಿಳೆಯರು ತನ್ನ ಪತಿ ಪರಸ್ತ್ರೀಯೊಂದಿಗೆ ಇರುವುದನ್ನು ನೋಡಿದರೂ ಅದನ್ನು ಬಾಯಿ ಬಿಟ್ಟು ಕೇಳುವ ಹಾಗಿಲ್ಲ. ಹಾಗೆ ಮಾಡಬೇಡಿ ಎಂದು ಬುದ್ಧಿ ಹೇಳುವ ಹಾಗಿಲ್ಲ. ಅಷ್ಟೇ ಏಕೆ ಇಂತಹ ಕೆಟ್ಟ ದಾರಿಯಲ್ಲಿ ಪತಿ ಸಾಗುತ್ತಿದ್ದರೂ ಸಹ ಅವುಗಳನ್ನೆಲ್ಲ ಮುಚ್ಚಿಟ್ಟು ತನ್ನ ಗಂಡ ಬಹಳ ಸಭ್ಯ ವ್ಯಕ್ತಿ ಎಂದು ಸಮಾಜಕ್ಕೆ ಸಾರಿ ಹೇಳುವ ಜವಾಬ್ದಾರಿಯುತ ಕೆಲಸವನ್ನು ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯಿಂದ ನಿರೀಕ್ಷಿಸುತ್ತದೆ. ಹಾಗಾದರೆ ಸಮಾಜ, ಸಂಸ್ಕೃತಿ ಕುಟುಂಬದ ಗೌರವವನ್ನು ಉಳಿಸುವ, ಘನತೆಯನ್ನು ಎತ್ತಿಹಿಡಿಯುವ, ಧಕ್ಕೆ ಬರದಂತೆ ನೋಡಿಕೊಳ್ಳುವ ಜವಾಬ್ದಾರಿ ಪುರುಷ ಸಮುದಾಯಕ್ಕೆ ಇಲ್ಲವೇ? ಎಂಬ ಪ್ರಶ್ನೆ ಕಾಡಲು ಆರಂಭಿಸುತ್ತದೆ. ಇವೆಲ್ಲವೂ ಹೆಣ್ಣಿಂದಲೇ ರಕ್ಷಿಸಲ್ಪಡುತ್ತಿದೆ ಎಂದಾದರೆ ಈ ಸಮಾಜವನ್ನು ಪುರುಷ ಪ್ರಧಾನ ಸಮಾಜ ಎಂದು ಹೇಳುವಲ್ಲಿ ಯಾವುದೇ ಅರ್ಥವಿಲ್ಲ.

ಹೆಚ್.ಐ.ವಿ. ಸೋಂಕಿತ ಪುರುಷರಿಗೆ ಕೇಳಲಾದ ಎಲ್ಲಾ ಪ್ರಶ್ನೆಗಳಿಗೂ ಅವರು ಭಯ, ಹಿಂಜರಿಕೆಯಿಲ್ಲದೆ ಸಮಾಜದ ನಿಯಂತ್ರಣವನ್ನು ಮೀರಿದವರಂತೆ ಪಟಪಟನೆ ಉತ್ತರಿಸುತ್ತಿದ್ದರು. ಇವರಿಗೆ ಯಾವುದೇ ಸಾಮಾಜಿಕ, ಮಾನಸಿಕ, ಶೈಕ್ಷಣಿಕ, ಆರ್ಥಿಕ, ಸಮಸ್ಯೆಗಳಿದ್ದುದು ನನ್ನ ಅವಲೋಕನಕ್ಕೆ ಕಂಡುಬರಲಿಲ್ಲ. ಸೋಂಕು ಬರುವುದಕ್ಕಿಂತ ಮುಂಚೆ ಹೇಗಿದ್ದರೋ ಸೋಂಕು ಬಂದ ಮೇಲೆಯೂ ಅವರ ಮನಃಸ್ಥಿತಿ ಹಾಗೆಯೇ ಇದೆಯೇನೊ ಎನ್ನಿಸಿತು.

ಲೈಂಗಿಕ ಸಂಭೋಗ ಕ್ರಿಯೆ ಒಂದು ಮುಚ್ಚಿದ ಪ್ರಕ್ರಿಯೆ. ಭಾರತೀಯ ಸಂಸ್ಕೃತಿಯ ಆದರ್ಶದ ಪ್ರಕಾರ ಈ ಕ್ರಿಯೆಯು ವಿವಾಹ ಸಂಸ್ಥೆಯ ಮುಖಾಂತರ ವಿವಾಹ ಚೌಕಟ್ಟಿನೊಳಗೆ ಏರ್ಪಡಬೇಕಾದ ಸಂಗತಿ. ಏಕ ಸಂಗಾತಿಯೊಂದಿಗೆ ಈ ಕ್ರಿಯೆ

ಜರುಗಬೇಕು. ಲೈಂಗಿಕ ತೃಪ್ತಿ, ಸಂತಾನ ಪಡೆಯುವಿಕೆಯ ಉದ್ದೇಶವೆ ಲೈಂಗಿಕ ಸಂಭೋಗದ ಮುಖ್ಯ ಗುರಿ. ಅವುಗಳೇನೆ ಇದ್ದರೂ ಸಂತಾನ ಪಡೆಯುವುದಕ್ಕೇ ಇದರ ಮೊದಲ ಆದ್ಯತೆ. ಏಕಪತ್ನಿತ್ವವು ಸಾಮಾಜಿಕ ಸಂಹಿತೆಯ ವಿಷಯವಾಗಿದ್ದರೂ ನಮ್ಮ ಪುರಾಣ, ಐತಿಹ್ಯಗಳಲ್ಲಿನ ಪುರುಷ ದೇವಾನುದೇವತೆಗಳ ಲೈಂಗಿಕ ಸಾಹಸಗಳು, ಬಹುಪತ್ನಿತ್ವಗಳು ನೀಡುವ ಸಾಮಾಜಿಕ ಸಂದೇಶಗಳು ಪುರುಷರಿಗೆ ಇನ್ನಿಲ್ಲದ ಅಘೋಷಿತ ರಿಯಾಯಿತಿಗಳನ್ನು ನೀಡಿವೆ. ತಾವು ಮಾಡುವುದು ತಪ್ಪೆಂಬುದು ಅವರ ಪ್ರಜ್ಞೆಯ ಸಂಗತಿಯೂ ಆಗದಷ್ಟು ಸಾಂಸ್ಕೃತಿಕವಾಗಿ ನೀಡಲ್ಪಟ್ಟ ರಿಯಾಯಿತಿಗಳು ಗಾಢ ಪ್ರಭಾವ ಬೀರಿವೆ.

ಪುರುಷ ಹೆಚ್.ಐ.ವಿ. ಸೋಂಕಿತರಲ್ಲಿ ಒಬ್ಬರಾದರೂ ಸಹ ತಾವು ಆತ್ಮಹತ್ಯೆಗೆ ಪ್ರಯತ್ನಿಸಿದೆವು ಎಂದು ಹೇಳಲಿಲ್ಲ. ಇದರಿಂದ ನಮಗೆ ತಿಳಿಯುವುದೇನೆಂದರೆ ಸೋಂಕಿನ ಕುರಿತಾದ ಸಾಮಾಜಿಕ ಭಯ ಪುರುಷರಲ್ಲಿ ಕಡಿಮೆ ಇದೆ ಎಂಬುದಾಗಿದೆ. ಪುರುಷ ಪ್ರಧಾನ ಧೋರಣೆಗಳನ್ನೇ ಅಸ್ತ್ರವಾಗಿಟ್ಟುಕೊಂಡು ಮಹಿಳಾ ಸಮುದಾಯವನ್ನು ಅವರದಲ್ಲದ ತಪ್ಪಿಗೂ ಮಾನಸಿಕ ಶಿಕ್ಷೆ ಅನುಭವಿಸುವಂತೆ ಮಾಡಿರುವುದು ಒಂದು ಅಮಾನವೀಯ ಸ್ಥಿತಿಯೇ ಆಗಿದೆ. ತಾಯಿಯಾದವರು ಮಗನ ತಪ್ಪನ್ನು ಕಂಡೂ ಕಾಣದಂತೆ ವರ್ತಿಸಿ ಸೊಸೆಯನ್ನು ಮಾಡದ ತಪ್ಪಿಗೆ ಶಿಕ್ಷಿಸಿ ಮನೆಯಿಂದಾಚೆಗೆ ದೂಡುವ ಪ್ರಯತ್ನಗಳಲ್ಲಿ ತೊಡಗಿರುವುದು ನೋಡಿದಾಗ ವಿಷಾದವೆನಿಸುತ್ತದೆ. ಆದರೂ ಅತ್ತೆಯೂ ಸಹ ಪುರುಷ ಪ್ರಧಾನ ಕುಟುಂಬದಿಂದಲೇ ಸಾಮಾಜೀಕರಣಕ್ಕೆ ಒಳಪಟ್ಟಿರುವುದು ಇದಕ್ಕೆ ಕಾರಣವೆಂದು ಹೇಳಬಹುದು.

**HIV/AIDS ಸೋಂಕಿತ ಪುರುಷರ ವಿಶೇಷ, ವಿಭಿನ್ನ ಹೇಳಿಕೆಗಳು (ಪುರುಷ ಪ್ರಧಾನ ಸಮಾಜದ ಧೋರಣೆಗಳನ್ನು ಎತ್ತಿಹಿಡಿಯುವ ಕೆಲವು ಅಂಶಗಳು):**

* ಇವೆಲ್ಲನೂ ಏನಂತ ಸಂಶೋಧನೆ ಮಾಡ್ತೀರಾ?
* ನಾವು ಏನೋ ಮಾಡ್ಕೋತೀವಪ್ಪ ಅವೆಲ್ಲನೂ ನಿಮಗೆ ಹೇಳೋಕಾಗುತ್ತಾ? ನಮ್ ಹೆಂಡ್ತೀರ್ಗೇ ಹೇಳಲ್ಲ ನಾವು!
* ಬೇರೆ ಹೆಂಗಸಿನ ಸಹವಾಸದಿಂದಲೇ ನಮಗೆ ಬಂದಿರುವುದು.
* ನಮ್ಮದೇ ಸಮಾಜ ನಮ್ಮದೇ ಸಂಸ್ಕೃತಿ ಅಲ್ಲುವ್ರ?
* 'ನಾವು ತಂದು ಹಾಕ್ತೀವಿ-ಅವಳು ಮಾಡಿ ಹಾಕ್ತಾಳೆ' ಏನಕ್ಕಾದರೂ ಕಮ್ಮಿಯಾದರೆ ತಾನೆ ಅವಳು ಕೇಳೋದು!
* ನನಗೆ ಕೋಪ ಜಾಸ್ತಿ. ಅದಕ್ಕೆ ಪತ್ನಿ ನನ್ನನ್ನು ಏನನ್ನಾದರೂ ಕೇಳಲು ಹೆದರುತ್ತಾಳೆ.
* ನಾವು ಗಂಡಸರು, ಏನು ಬೇಕಾದರೂ ಮಾಡುತ್ತೇವೆ. ಏನು ಮಾಡಿದರೂ ನಡೆಯುತ್ತದೆ. ಹಾಗೆಂದು ಮಹಿಳೆಯರೂ ಅಂತಹ ಕೆಲಸಕ್ಕೆ ಇಳಿದರೆ ಕುಟುಂಬದ ಗೌರವ ಏನಾಗಬೇಕು? ಹಾಗೇನಾದರೂ ಮಾಡಿದರೆ ನಮ್ಮ ಪಾಲಿಗೆ ಅವಳು ಸತ್ತ ಹಾಗೆ ಎಂದು ತವರು ಮನೆಗೆ ಕಳುಹಿಸುತ್ತೇವೆ.
* ಗಂಡ ಹೇಳಿದ ಹಾಗೆ ಕೇಳದ ಮೇಲೆ ಅವಳೂ ಒಂದು ಹೆಣ್ಣಾ?
* ಅವಳ ತಂದೆ-ತಾಯಿ ಸರಿಯಾಗಿ ಬುದ್ಧಿ ಕಲಿಸಿದ್ದರೆ ಅವಳ್ಯಾಕೆ ಗಂಡನನ್ನು ಪ್ರಶ್ನೆ ಮಾಡುತ್ತಾಳೆ ಹೇಳಿ?
* ಅವಳು ಕೇಳಲಿ ನೋಡ್ತೀನಿ, ಅಷ್ಟು ಧೈರ್ಯ ಅವಳಿಗೆಲ್ಲಿದೆ?
* ನಾವು ಒಂದೇ ಕಡೆ ಇರಬೇಕು, ಒಬ್ಬಳ ಜೊತೇಲೆ ಇರ್ಬೇಕು ಅಂತ ರೂಲ್ಸಿಲ್ಲ.
* ನಾವು ಕುಡೀತೀವಿ, ಸಿಗರೇಟು ಸೇದುತ್ತೀವಿ. ಅವಳೂ ಹಾಗೆ ಮಾಡೋಕಾಗುತ್ತಾ? ನಾವು ಯಾರ ಜೊತೆಯಾದರೂ ಇರ್ತೀವಿ.

## ಕನಸುಗಳ ಬಿತ್ತಿರಿ

ಹೊತ್ತಿ ಉರಿಯುತಿದೆ ದೇಶ
ಎಲ್ಲೋ ಏನೋ ಇದೆ ದೋಷ
ಊರು ಊರಿನಲಿ ಭುಗಿಲು
ತಾಂಡವವಾಡುತಿದೆ ದಿಗಿಲು

ಮನೆಯ ಗೋಡೆಯೊಳಬಂಧಿ ಮಹಿಳೆಯರೇ
ಎಚ್ಚೆತ್ತು ಸಾಗಿರಿ ಇನ್ನು
ಮನೆಗೆಲಸದ ಹೊರೆ ಹೊತ್ತ ಭಗಿನಿಯರೇ
ಹೊರಗೆ ಬನ್ನಿರಿ ಇನ್ನು ವಿದ್ಯೆ ಕಲಿಯಿರಿ, ವಿದ್ಯೆ ಕಲಿಸಿರಿ

ಕತ್ತಲ ಕೂಪ ಸಾಕಿನ್ನು
ಬೆಳಕ ಬಿತ್ತರಿ, ಬೆಳಕ ಬೆಳೆಯಿರಿ
ಅಂಧಶ್ರದ್ಧೆ ಸಾಕಿನ್ನು
ಹೆಣ್ಣು-ಗಂಡೆಂಬ ಭೇದ ತೊಡೆದು ಹಾಕಿರಿ

ಹೆಣ್ಣು ಮಗುವಿಗೆ ವಿದ್ಯೆ ಕಲಿಸಿರಿ
ಇಂಜಿನಿಯರ್, ಸಾಹಿತಿ, ವಿದ್ಯೆ, ಜ್ಞಾನಿ
ನಿಮ್ಮ ಮಗಳಾಗಲಿ ದೇಶಪ್ರೇಮಿ.

ಗಗನದಿ ಹಾರುವ ಕಾಲವಿದು
ನವವಿಜ್ಞಾನದ ಜಾಲವಿದು
ಕನಸಕಾಣಿರಿ, ಕನಸಬಿತ್ತರಿ
ಸಂಕೋಲೆಗಳ ತೊಡೆದು ಹಾಕಿರಿ

ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡು
ಹೆಗಲಿಗೆ ಹೆಗಲು ಕೊಟ್ಟು ನಡೆಯಿರಿ
ಬದುಕ ಬವಣೆಯಲಿ ಧೃತಿಗೆಡದೆ
ಒಬ್ಬರಿಗೊಬ್ಬರು ಆಸರೆಯಾಗಿ ನಡೆಯಿರಿ.

■ ಎಸ್. ಮಾಲತಿ

**ಹೆಣ್ಣಾದರೂ ಇರಲಿ, ಗಂಡಾದರೂ ಇರಲಿ**
**ವಿದ್ಯೆ ಸಮ ಸಮ ಸಿಗಲಿ**



ಅದನ್ನೆಲ್ಲಾ ಅವಳು ಕೇಳುವ ಹಾಗಿಲ್ಲ. ಮನೇಲಿ ತಿನ್ನೋಕೆ ಕುಡಿಯೋಕೆ ಇಲ್ಲ ಅಂದ್ರೆ ಕೇಳಲಿ.

* ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರಬೇಕು ಅಷ್ಟೇ.

**ವೈದ್ಯರು – ಆಪ್ತ ಸಮಾಲೋಚಕರ ಸಂದರ್ಶನ**

ಹೆಚ್.ಐ.ವಿ. ಸೋಂಕಿತರಲ್ಲಿ ಕೆಲವರು ಮೇಲ್ನೋಟಕ್ಕೆ ಸಂತೋಷದ ನಗುಮುಖದಿಂದ ತೋರಲ್ಪಟ್ಟರೂ ಅವರೊಳಗಿನ ವೇದನೆ ಕಿಂಚಿತ್ತೂ ಕಡಿಮೆಯಾಗಿರುವುದಿಲ್ಲ. ಬದುಕಿನ ಮೇಲೆ ಪ್ರೀತಿಯಿಲ್ಲದೆ ತಮ್ಮನ್ನು ತಾವೇ ಹಿಂಸಿಸಿಕೊಳ್ಳುತ್ತಿರುತ್ತಾರೆ. ಪ್ರಾಣವನ್ನೂ ಬಿಡಲಾರದೆ, ಬದುಕನ್ನು ಪ್ರೀತಿಸಲೂ ಆಗದೆ ಸಂಕಷ್ಟಕ್ಕೆ ಸಿಲುಕಿರುತ್ತಾರೆ. ಮಹಿಳಾ ವೈದ್ಯೆಯರು "ಪತಿಯಿಂದಲೇ ಹೆಚ್ಚಿನ ಮಹಿಳೆಯರಿಗೆ ಹೆಚ್.ಐ.ವಿ. ಸೋಂಕು ಹರಡುತ್ತಿದೆ" ಎಂದು ತಿಳಿಸಿದರು. ಸಂದರ್ಶನಕ್ಕೆ ಒಳಗಾದವರ ಪೈಕಿ ಶೇ. 80ರಷ್ಟು ಪುರುಷ ವೈದ್ಯರೂ ಸಹ ಏಕ ಸಂಗಾತಿ ಪದ್ಧತಿಯನ್ನು ಅನುಸರಿಸಬೇಕು ಎಂಬುದರ ಬಗ್ಗೆ ಉತ್ತಮ ಸಲಹೆಯನ್ನು ನೀಡಿದರು. ಪತಿಯಂದಿರು ಸೋಂಕನ್ನು ಪಡೆದು ಹೆಚ್ಚಾಗಿ ಪತ್ನಿಯರಿಗೆ ಹರಡಲು ಕಾರಣರಾಗಿದ್ದಾರೆ ಎಂದೂ ಹೇಳಿಕೆ ನೀಡಿದರು. ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯರು ಹೆಚ್.ಐ.ವಿ. ಸೋಂಕಿತರನ್ನು ನಿಕೃಷ್ಟವಾಗಿಯೇ ಭಾವಿಸುತ್ತಿರುವುದು ಕಂಡುಬಂದಿತು. ವೈದ್ಯರೂ ಸಹ ಸಾಂಪ್ರದಾಯಿಕ, ಮೂಢನಂಬಿಕೆಗಳ ನೆಲೆಯಲ್ಲಿ ಹೆಚ್.ಐ.ವಿ. ಬಾಧಿತರನ್ನು ಉಪಚರಿಸುತ್ತಾರೆ. ಹೆಚ್.ಐ.ವಿ. ಸೋಂಕಿತ ಮಹಿಳೆಯರೂ ಸಹ ವೈದ್ಯರು ನಮ್ಮನ್ನು ಸ್ಪರ್ಶಿಸಿ ಪರೀಕ್ಷೆ ಮಾಡುವುದಿಲ್ಲ ಎಂದು ಹೇಳಿದ್ದಾರೆ. 'ವೈದ್ಯೋ ನಾರಾಯಣೋ ಹರಿಃ' ಎಂದು ವೈದ್ಯರನ್ನು ದೇವರಿಗೆ ಹೋಲಿಸುವ ಜನರು ಇನ್ನೂ ಇದ್ದಾರೆ. ಅಂತೆಯೇ ಅದಕ್ಕೆ ತಕ್ಕ ಹಾಗೆ ಕೆಲಸ ಮಾಡುವ ವೈದ್ಯರೂ ಇದ್ದಾರೆ. ಆದರೆ ಕೆಲವು ವೈದ್ಯರು ಮಾತ್ರ ದೇವರು ಎಂಬ ಪದಕ್ಕೆ ಚ್ಯುತಿಯನ್ನುಂಟು ಮಾಡುತ್ತಿದ್ದಾರೆ.

ಡಾ. ಮಂಜುನಾಥ ಎಂಬುವವರು 'ಹೆಚ್.ಐ.ವಿ. ಸೋಂಕಿತರು ಬಹಳ ನೋವಿನಲ್ಲಿ ಮುಳುಗಿರುತ್ತಾರೆ. ಅವರಿಗೆ ಜೀವನದ ಬಗೆಗೆ ಆಸಕ್ತಿ ಇರುವುದಿಲ್ಲ. ಯಾವಾಗಲೂ ಮಂಕಾಗಿರುತ್ತಾರೆ. ಮಕ್ಕಳಿದ್ದರಂತೂ ಅವರಿಗೋಸ್ಕರ ಜೀವನ ಸಾಗಿಸುತ್ತಾರೆ. ಮಕ್ಕಳ ಭವಿಷ್ಯದ ಬಗೆಗೆ ಚಿಂತೆ ಮಾಡುತ್ತಿರುತ್ತಾರೆ. ಖಿನ್ನತೆಯ ಮಡಿಲಲ್ಲಿ ದಿನವೂ ಮಲಗಿರುತ್ತಾರೆ. ಆತಂಕವು ಅವರ ಒಡಲಲ್ಲಿ ಮನೆ ಮಾಡಿರುತ್ತದೆ. ಆದರೆ ಇನ್ನು ಕೆಲವು ಹೆಚ್.ಐ.ವಿ. ಸೋಂಕಿತರು ಮಾನಸಿಕವಾಗಿಯೂ ಯಾವುದೇ ಚಿಂತೆಗಳನ್ನು ಮನಸ್ಸಿಗೆ ಹಾಕಿಕೊಳ್ಳದೇ ಮುನ್ನಡೆಯುತ್ತಾರೆ. ಬೆರಳೆಣಿಕೆಯಷ್ಟು ಮಹಿಳೆಯರು ತಮ್ಮ ನಡವಳಿಕೆಯಿಂದಲೇ ಸೋಂಕು ಅಂಟಿದ್ದಕ್ಕೆ ಪರಿತಪಿಸುತ್ತಾರೆ. ಅಷ್ಟೇ ಬೇಗ ತಮ್ಮಿಂದಲೇ ಆದ ತಪ್ಪೆಂದು ತಿಳಿದು ಅದನ್ನು ಕಡಿಮೆ ಕಾಲದಲ್ಲಿ ಮರೆತು ಭವಿಷ್ಯದ ಹೆಜ್ಜೆಗಳನ್ನು ಲೆಕ್ಕಹಾಕುತ್ತಾರೆ' ಎನ್ನುತ್ತಾರೆ.

ಆಪ್ತ ಸಮಾಲೋಚಕರು ಹಾಗೂ ವೈದ್ಯರನ್ನು ಭೇಟಿ ಯಾಗುವ ಸಂದರ್ಭದಲ್ಲಿ ಏನು ಮಾತನಾಡಬೇಕು, ಎಷ್ಟು ಮಾತನಾಡಬೇಕು, ಯಾವ ಪ್ರಶ್ನೆಗೆ ಯಾವ ಉತ್ತರ ಕೊಡಬೇಕು ಎಂಬ ವಿಷಯಗಳ ಬಗೆಗೆ ಹೆಚ್.ಐ.ವಿ. ಪೀಡಿತರು ಪೂರ್ವಾಲೋಚನೆ ಮಾಡಿಕೊಂಡು ಬರುತ್ತಾರೆ. ಹೆಚ್.ಐ.ವಿ. ಸೋಂಕು ನಿಮಗೆ ಹೇಗೆ ಬಂದಿರಬಹುದೆಂದು ಕೇಳುವ ಪ್ರಶ್ನೆಗೆ 'ತಿಳಿದಿಲ್ಲ' ಎಂದು ಹೇಳಿ ಪೂರ್ಣ ವಿರಾಮ ಹಾಕಿ ಬಿಡುತ್ತಾರೆ. ಅವರಿಂದ ಸತ್ಯಾಂಶ ತಿಳಿಯುವುದು ಅಷ್ಟು ಸುಲಭದ ವಿಷಯವಲ್ಲವೆಂದು ಡಾ. ಮಂಜುನಾಥ್‌ರವರು ಸಾರಾಸಗಟಾಗಿ ಹೇಳುತ್ತಾರೆ.

ವೈದ್ಯರ ಅಭಿಪ್ರಾಯದಂತೆ "ಹಲವು HIV/AIDS ಸೋಂಕಿತರು ನಮ್ಮನ್ನು ದೇವರೆಂದು ಭಾವಿಸುತ್ತಾರೆ. ಅವರ ಈ ಖಾಯಿಲೆಯನ್ನು ಸಂಪೂರ್ಣವಾಗಿ ವಾಸಿ ಮಾಡುತ್ತೇವೆಂದು ನಂಬಿಕೆ ಇಟ್ಟಿದ್ದಾರೆ. ಅವರಿಗೆ ಸೋಂಕಿನ ಬಗ್ಗೆ ಪೂರ್ಣ ಮಾಹಿತಿ ತಿಳಿದಿಲ್ಲ. ಮಾಹಿತಿಯನ್ನು ತಿಳಿಸಿ ಹೇಳಿದರೂ ಸಹ ಅದನ್ನು ನಂಬುವ ಪರಿಸ್ಥಿತಿಯಲ್ಲಿ ಅವರಿಲ್ಲ. ಅವರು ಬಹಳ ಮುಗ್ಧರು. ಕುಟುಂಬ, ವಿವಾಹ, ಮಕ್ಕಳು, ಗಂಡ, ಗಂಡನ ಪರಿವಾರ ಇಷ್ಟೇ ಅವರ ಜಗತ್ತು. ಪತಿಯ ಕ್ರೂರತ್ವದ ಅರಿವು ಅವರಿಗಿಲ್ಲ. ಅದೆಷ್ಟೋ ಕಾಮುಕ ಮುಖವಾಡ ಧರಿಸಿದ ಪತಿಯಂದಿರು ಪತ್ನಿಯನ್ನು, ಅಷ್ಟೇ ಅಲ್ಲದೆ ಇತರ ಮಹಿಳೆಯರನ್ನೂ ತಮ್ಮ ಲೈಂಗಿಕ ತೃಷೆಯ ಈಡೇರಿಕೆಗೆ ಬಳಸಿಕೊಂಡು ವಂಚನೆಗೈಯುತ್ತಿದ್ದಾರೆ. ಈ ಕ್ರಿಯೆಯ ಮುಖಾಂತರವೂ ಹೆಚ್.ಐ.ವಿ./ಏಡ್ಸ್ ಸೋಂಕು ಹರಡುತ್ತಿದೆ. ಮಹಿಳೆಯರು ಕುಟುಂಬದ ಕಣ್ಣು, ಕುಟುಂಬದ ಬೆಳಕು, ಸಂಸ್ಕೃತಿಯನ್ನು ಉಳಿಸುವವರು–ಬೆಳೆಸುವವರು ಎಂದು ಲಾಭವಿಲ್ಲದ ಪಟ್ಟ ಕಟ್ಟಿರುವ ಕಾರಣವಾಗಿ ಪುರುಷರನ್ನು ಅಪಕೀರ್ತಿಗೆ ಒಳಗುಮಾಡಲು ಮಹಿಳೆಯರೇ ಬಿಡುತ್ತಿಲ್ಲ. ಎಲ್ಲಿ ತನ್ನ ಗಂಡನ ಕೆಟ್ಟ ಕೃತ್ಯಗಳು ಸಮಾಜಕ್ಕೆ ತಿಳಿದು ಇಂತಹವನ ಹೆಂಡತಿ ಎಂದು ಬೆರಳು ಮಾಡಿ ತೋರಿಸಿ ಬಿಡುತ್ತಾರೊ ಎಂದು ಆತನನ್ನು ರಕ್ಷಿಸುವ ಹೊಣೆಗಾರಿಕೆಯನ್ನೂ ಮಹಿಳೆ ಪರಿಪಾಲಿಸುತ್ತಿದ್ದಾಳೆ. ಅವಳು ತನ್ನ ಇಡೀ ಜೀವನವನ್ನು ಗಂಡ, ಗಂಡನ ಪರಿವಾರ ಹಾಗೂ ತವರು ಮನೆಯ ಗೌರವ, ಮನೆತನವನ್ನು ಕಾಪಾಡುವ ಜವಾಬ್ದಾರಿಯಲ್ಲೇ ಸವೆಸಿಬಿಡುತ್ತಾಳೆ."

ಅದೆಷ್ಟೋ ಮಹಿಳೆಯರು ಚಿಕಿತ್ಸೆಗೆಂದು ಆಸ್ಪತ್ರೆಗೆ ಬರಲಾಗದ ಸ್ಥಿತಿಯಲ್ಲಿದ್ದಾರೆ. ವೈದ್ಯರೆದುರು ತಮ್ಮ ನೋವನ್ನು ಹಂಚಿಕೊಳ್ಳುತ್ತಾರೆ. ಅದರಲ್ಲೂ ಮಹಿಳಾ ಹೆಚ್.ಐ.ವಿ. ಸೋಂಕಿತರು ತರಾತುರಿಯಲ್ಲಿ ಆಸ್ಪತ್ರೆಗೆ ಬಂದು ಔಷಧಿ, ಚಿಕಿತ್ಸೆ ಪಡೆದು ಬೇಗನೆ ಹಿಂದಿರುತ್ತಾರೆ. ಇದಕ್ಕೆ ಕಾರಣವಿದೆ. ಅದೇನೆಂದರೆ ತಮಗೆ ಹೆಚ್.ಐ.ವಿ. ಇರುವುದನ್ನು ಕುಟುಂಬದ ಸದಸ್ಯರಿಗೆ ಹಾಗೂ ಸ್ಥಳದ ಸಾರ್ವಜನಿಕರಿಗೆ ಇವರು ತಿಳಿಸಿರುವುದಿಲ್ಲ. ಆಸ್ಪತ್ರೆಗೆ ಬರುವಾಗ ಕುಟುಂಬದಲ್ಲಿ ಹೇಳಿ ಬಂದಿರುವುದಿಲ್ಲ. ಅಥವಾ ಬೇರೆ ಯಾವುದಾದರೂ ರೋಗ ಹೇಳಿ ಬಂದಿರುತ್ತಾರೆ. ಅಷ್ಟೇಅಲ್ಲದೆ ತಾನು ಆಸ್ಪತ್ರೆಗೆ ಬಂದಿರುವುದನ್ನು ಸುತ್ತಮುತ್ತಲ ಪರಿಚಯದ ಜನರಿಗೆ ಎಲ್ಲಿ ಕಂಡುಬಿಡುತ್ತದೋ ಎಂದು ಹೆದರಿ ತರಾತುರಿಯಲ್ಲಿರುತ್ತಾರೆ.

ವೈದ್ಯರು ಹೇಳಿರುವ ಈ ಸಂಗತಿಗೆ ಪೂರಕವಾಗಿ ಈ ಅಧ್ಯಯನಕ್ಕೆ ದೊರೆತ ಸರಸ್ವತಿ (ಹೆಸರು ಬದಲಾಯಿಸಲಾಗಿದೆ) ಎಂಬಾಕೆಯ ಪ್ರಕರಣದ ಉದಾಹರಣೆಯನ್ನು ಈ ಮುಂದಿನಂತೆ ವಿವರಿಸಲಾಗಿದೆ. ತಿರುಮಕೂಡಲು ನರಸೀಪುರದ 'ಸಮುದಾಯ ಆರೋಗ್ಯ ಕೇಂದ್ರ'ದಲ್ಲಿ

ಸರಸ್ವತಿ ಎಂಬುವವರ ಜೊತೆ ಸಂದರ್ಶನದಲ್ಲಿ ತೊಡಗಿದ್ದಾಗ, ಸರಸ್ವತಿಗೆ ಪರಿಚಯವಿರುವ, ಅವರದೇ ಗ್ರಾಮದ ಇಬ್ಬರು ಮಹಿಳೆಯರು ಕಾಣಿಸಿಕೊಂಡುಬಿಟ್ಟರು. ಆ ಕ್ಷಣ ಸರಸ್ವತಿಯವರ ಮುಖದಲ್ಲಿ ಭಾವನೆಗಳು ಭಯದಿಂದ ಕೂಡಿ ಹೋದವು. ಆ ಭಯವನ್ನು ಮುಚ್ಚಿಡುವ ಪರಿಯನ್ನು ಕೂಲಂಕಶವಾಗಿ ಪರಿಶೀಲಿಸಿದರೆ ಸಾಮಾನ್ಯ ಮಹಿಳೆಯರೂ ಸಹ ರಂಗಭೂಮಿ ಕಲೆಯನ್ನು ಮೀರಿಸಬಲ್ಲರೆಂದು ನನಗನ್ನಿಸಿತು. ಸರಸ್ವತಿಯವರು ತಮಗೆ ಪರಿಚಯವಿರುವ ಆ ಇಬ್ಬರು ಮಹಿಳೆಯರನ್ನು ಕಂಡು ಹೇಳಿದ ಉತ್ತರ ಹೀಗಿತ್ತು. "ಯಾಕೋ ಹೊಟ್ಟೆ ನೋವಿತ್ತು. ಮೇಡಂ ನನಗೆ ತುಂಬಾ ವರ್ಷದಿಂದ ತಿಳಿದಿದ್ದಾರೆ. ನಮಗೆ ನೆಂಟರೇ ಆಗಬೇಕು. (ನನ್ನನ್ನು ತೋರಿಸಿ) ಈ ಮೇಡಂ ಕೈಯಲ್ಲಿ ಒಂದು ಲೆಟರ್ ಬರೆಸಿಕೊಂಡು ಹೋದರೆ ಡಾಕ್ಟರು ಬೇಗನೆ, ಚೆನ್ನಾಗಿ ನೋಡುತ್ತಾರೆ ಎಂದು ಚೀಟಿ ಬರೆಸಿಕೊಳ್ಳಲು ಬಂದೆ. ನೀವೇನಿಲ್ಲಿ ಅಕ್ಕ. ನಿಮಗೂ ಚೀಟಿ ಬೇಕೆಂದರೆ ಹೇಳಿ, ಮೇಡಂ ಕೈಯಲ್ಲಿ ಬರೆಸಿಕೊಡುತ್ತೇನೆ. ಡಾಕ್ಟ್ರು ಬೇಗ ನೋಡ್ತಾರೆ" ಎಂದರು. ಕ್ಷಣ ಕಾಲ ನಾನು ನನ್ನ ಸಂಶೋಧನಾ ಕೆಲಸವನ್ನೇ ಮರೆತುಬಿಟ್ಟೆ. ಸರಸ್ವತಿಯವರೊಂದಿಗೆ ಸೇರಿ ಏನು ಹೇಳಬೇಕೋ ತಿಳಿಯದೇ ಅವರು ಕೊಡುತ್ತಿದ್ದ ಉತ್ತರವನ್ನು ಒಪ್ಪಿಕೊಳ್ಳುತ್ತಿದ್ದವಳ ಹಾಗೆ ತಲೆ ಅಲ್ಲಾಡಿಸಿ ಹು... ಹು ಎಂದು ಪಿಸುಗುಡುತ್ತಿದ್ದೆ. ಇದು ಮಹಿಳಾ ಹೆಚ್.ಐ.ವಿ. ಸೋಂಕಿತರ ನಿಜ ಸ್ಥಿತಿ.

ಇಂದಿಗೂ ಜನರು, ವೈದ್ಯರು ಸರ್ಕಾರಿ ಉದ್ಯೋಗದಲ್ಲೇ ತೊಡಗಿದ್ದರೂ ಸಹ ನಮ್ಮ ಆರೋಗ್ಯ ರಕ್ಷಣೆ ಮಾಡುವವರಿಗೆ ಕಾಣಿಕೆಯಾಗಿ ಏನನ್ನಾದರೂ ನೀಡಬೇಕೆಂದು ಕೈಲಾದಷ್ಟು ಹಣವನ್ನು ಚಿಕಿತ್ಸೆಗೆ ಪ್ರತಿಫಲವಾಗಿ ನೀಡಿ ಹೋಗುತ್ತಾರೆ. ಖಾಸಗಿ ಆಸ್ಪತ್ರೆಯ ವೈದ್ಯರಿಗೆ ಹೆಚ್ಚು ಹಣ ನೀಡಬೇಕು. ಸರ್ಕಾರಿ ವೈದ್ಯರು ಚೆನ್ನಾಗಿಯೇ ಚಿಕಿತ್ಸೆ ನೀಡುತ್ತಾರೆ. ಅವರಿಗೆ ಸ್ವಲ್ಪ ಹಣ ಕೊಟ್ಟರೇನು ಎಂಬುದು ಸಾರ್ವಜನಿಕರ ಅಭಿಪ್ರಾಯವೆಂದು ಹೇಳುತ್ತಾರೆ ಡಾ. ಸವಿತಾ. ವೈದ್ಯರಾಗಿ ನಾವೂ ಸಹ ಉತ್ತಮ ಜವಾಬ್ದಾರಿಯನ್ನು ಹೊಂದಿರುತ್ತೇವೆ. ಯಾರು ಜವಾಬ್ದಾರಿ ಮರೆತು ರೋಗಿಗಳನ್ನು ಸುಲಿಗೆ ಮಾಡುತ್ತಾರೋ ಅವರು ವೈದ್ಯ ವೃತ್ತಿಗೆ ಅರ್ಹರಲ್ಲ ಎಂದು ಒತ್ತಿಹೇಳಿದರು. ಅವರ ಮಾತಿನಲ್ಲಿ ಸಮಾಜ ಸೇವೆಯ ಆಶಯವಿತ್ತು. ಎಲ್ಲರೂ ಬದುಕುವುದು 70-80 ವರ್ಷ. ಈ ಜೀವನದಲ್ಲಿ ಬಾಲ್ಯ, ಯೌವ್ವನ, ಗೃಹಸ್ಥ, ಮುಪ್ಪು ಎಂಬ ನಾಲ್ಕು ಹಂತಗಳಿದ್ದು, ಈ ಹಂತಗಳು ತನ್ನದೇ ಆದ ಕಾರ್ಯಗಳು, ಕರ್ತವ್ಯಗಳನ್ನು ಹೊಂದಿರುತ್ತವೆ. ಅವುಗಳನ್ನು ಜವಾಬ್ದಾರಿಯುತವಾಗಿ ಮನುಷ್ಯ ನಿರ್ವಹಿಸಬೇಕು. ಆಗಲೇ ಬದುಕಿದ್ದು ಸಾರ್ಥಕವೆನಿಸುತ್ತದೆ. ನಮ್ಮ ಅವಶ್ಯಕತೆಗೂ ಮೀರಿ ಐಷಾರಾಮಿ ಜೀವನದ ಬದುಕನ್ನು ಸಾಗಿಸಬಾರದು. ಅವಶ್ಯಕತೆ ಇರುವವರಿಗೆ ನಮ್ಮಲ್ಲಿ ಉಳಿದಿರುವ ಅಂಶವನ್ನು ಸೇವೆಯೆಂದು ತಿಳಿದು ಹಂಚಬೇಕು. ಹೀಗಾದಾಗ ಮಾತ್ರ ಪ್ರಪಂಚವನ್ನು ಇನ್ನಷ್ಟು ಕಾಲ ಸುವ್ಯವಸ್ಥೆಯಿಂದಿಡಲು ಸಾಧ್ಯ. ಅದರೊಳಗೆ ನಾವು ನಮ್ಮವರೆಲ್ಲರೂ ನೆಮ್ಮದಿಯ ಜೀವನ ನಡೆಸಲು ಸಾಧ್ಯ ಎಂದು ಅಭಿಪ್ರಾಯವನ್ನು ಡಾ. ಸವಿತಾ ನೀಡಿದರು. ಅವರ ಈ ಮಾತುಗಳಲ್ಲಿ ಛಲವಿತ್ತು. ಅದರಂತೆ ನಡೆಯಬೇಕು ಎನ್ನುವ ಧ್ಯೇಯವಿತ್ತು. ಡಾ. ಸವಿತಾ ಅವರದು ಸರಳ ನಡೆ ನುಡಿ. ಶ್ರೀಮಂತ ಕುಟುಂಬದಿಂದ ಬೆಳೆದು ಬಂದವರಾಗಿದ್ದರೂ ಸ್ವಲ್ಪವೂ ಆಡಂಬರವಿರಲಿಲ್ಲ. ಹೆಚ್.ಐ.ವಿ. ಪೀಡಿತರನ್ನು ಹತ್ತಿರದಲ್ಲಿ ಕೂರಿಸಿಕೊಂಡು ಅವರ ಕಷ್ಟ ಸುಖಗಳನ್ನು ಕೇಳುವ ಹಾಗೂ ಅದಕ್ಕೆ ತಕ್ಕುದಾದ ಸಲಹೆಗಳನ್ನು ತಿಳಿಸುವ ಮನೋಭಾವ ಇವರದು. ಈ ಮಾತಿಗೆ ಪೂರಕವೆಂಬಂತೆ ನಾಲ್ಕಾರು ಹೆಚ್.ಐ.ವಿ. ಪೀಡಿತ ವ್ಯಕ್ತಿಗಳು ತಮ್ಮ ಅಭಿಪ್ರಾಯಗಳನ್ನು ತಿಳಿಸಿಕೊಟ್ಟರು.

ಒಟ್ಟಾರೆಯಾಗಿ ಡಾ. ಸವಿತಾರವರು ಹೇಳುವುದು ಇಷ್ಟೆ. "ನಾವು ಚೆನ್ನಾಗಿದ್ದರೆ ಸಮಾಜ ಚೆನ್ನಾಗಿರುತ್ತದೆ. ಸಮಾಜವನ್ನು ಚೆನ್ನಾಗಿ ನೋಡಿಕೊಂಡರೆ ನಾವು ಚೆನ್ನಾಗಿರುತ್ತೇವೆ. ಹಾಗಾಗಿ ಸಮಾಜದ ಒಳಿತಿಗಾಗಿ ನಮ್ಮನ್ನು ನಾವು ಮುಡುಪಾಗಿಡಬೇಕು. ಜನರು ಅಸುರಕ್ಷಿತ ಲೈಂಗಿಕತನವನ್ನು ಬಿಡಬೇಕು. ಏಕಸಂಗಾತಿ ತತ್ತ್ವವನು ಪರಿಪಾಲಿಸ ಬೇಕು. ಆಗ ಮಾತ್ರ ಹೆಚ್.ಐ.ವಿ.ಯನ್ನು ತಡೆಗಟ್ಟಲು ಸಾಧ್ಯ."

"ಹೆಚ್.ಐ.ವಿ./ಏಡ್ಸ್ ಪೀಡಿತರು ಧೈರ್ಯ ತೆಗೆದುಕೊಳ್ಳಬೇಕು. ಸ್ವಸಾಮರ್ಥ್ಯದಿಂದ ಹೆಚ್.ಐ.ವಿ.ಯನ್ನು ಎದುರಿಸಬೇಕು. ಆತಂಕವನ್ನು ದೂರವಿಡಬೇಕು. ಆತ್ಮವಿಶ್ವಾಸವನ್ನು ಮೈಗೂಡಿಸಿಕೊಳ್ಳಬೇಕು." ಎಂದು ಡಾ. ರಘುಕುಮಾರ್‌ರವರು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು. ಅದರಲ್ಲೂ ಮಹಿಳಾ ಸೋಂಕಿತರು ಸಮಾಜದಲ್ಲಿನ ತಾರತಮ್ಯತೆ, ಕಳಂಕವನ್ನು ಎದುರಿಸಬೇಕಾಗುತ್ತದೆ. ಸಮಾಜದ ವಕ್ರದೃಷ್ಟಿ ಬೇಗನೆ ಹರಿಹಾಯುವುದು ಮಹಿಳೆಯರ ಮೇಲೆ. ಮಹಿಳೆಯರು ಏನಾದರೂ ಸ್ವಲ್ಪ ಆಚೀಚೆ ಹೋದರೂ (ಹೆಜ್ಜೆ ಇಟ್ಟರೂ, ಮಾತನಾಡಿದರೂ) 'ಅವಳನ್ನು ಹದ್ದುಬಸ್ತಿನಲ್ಲಿಟ್ಟುಕೊ' ಎಂದು ಜನರು ಗಂಡಿಗೆ ಸಲಹೆ ನೀಡುತ್ತಾರೆ. ಆದರೆ ಈ ಮಾತು ಗಂಡಿನಲ್ಲಿ ಬೇರೆಯದೇ ಆದ ಅರ್ಥಪಡೆಯುತ್ತದೆ. ಅದೇನೆಂದರೆ 'ಅವನು ಗಂಡಸು ಏನು ಮಾಡಿದರೂ ನಡೆಯುತ್ತದೆ' ಎಂದು. ಇವು ಅನಾದಿಕಾಲದಿಂದಲೂ ನಡೆದು ಬಂದಿರುವ ಲಿಂಗತಾರತಮ್ಯವನ್ನು ಸೂಚಿಸುವ ಉದಾಹರಣೆ ಗಳಾಗಿವೆ. 'ಹೆಚ್.ಐ.ವಿ. ಎಂಬುದೊಂದು ಬದುಕಿನ ಪ್ರಶ್ನೆ, ಸಂಸ್ಕೃತಿಯ ಪ್ರಶ್ನೆಯಾಗಿ ಮಾತ್ರ ಉಳಿಯದೆ ಸಾವಿನ ಪ್ರಶ್ನೆಯಾಗಿಯೂ ಉಳಿದು ಹೋಗಿದೆ.' ಎನ್ನುತ್ತಾರೆ. ಡಾ. ಟಿ. ರಘುಕುಮಾರ್ (District AIDS Prevention and control officer ಮೈಸೂರು)

'ಪ್ರತಿ ದಿನವೂ ನಮಗೆ HIV ಸೋಂಕಿತರನ್ನು ನೋಡಿ ನೋಡಿ ಅದು ಸಾಮಾನ್ಯ ರೋಗ ಎಂದೆನಿಸಿಬಿಟ್ಟಿದೆ. ನಿಮ್ಮ ಹಾಗೆ ವಿವಿಧ ದೃಷ್ಟಿಕೋನಗಳಿಂದ ಅದನ್ನು ಪರಿಭಾವಿಸ ಬೇಕೆಂದು ಯೋಚನೆಗೂ ಬರುವುದಿಲ್ಲ. ಆದರೂ ಯೋಚಿಸಲೇ ಬೇಕೆಂಬ ಉದ್ದೇಶವನ್ನಿಟ್ಟು ಕೊಂಡಾಗ ಹಲವು ವಿಷಯಗಳು, ಪ್ರಶ್ನೆಗಳು, ಗೊಂದಲಗಳು ಮನಸ್ಸಿನಲ್ಲಿ ಒಡಮೂಡುತ್ತವೆ. ಸಾಮಾನ್ಯವಾಗಿ ಹೆಚ್.ಐ.ವಿ. ಸೋಂಕಿತರು ಎಂದರೆ ಮುಕ್ತ ಲೈಂಗಿಕತೆಯನ್ನು ಹೊಂದಿರುವವರು ಎಂದೇ ಎಲ್ಲರೂ ವ್ಯಾಖ್ಯಾನಿಸುತ್ತಾರೆ. ಅದರಲ್ಲೂ HIV/AIDS ರೋಗ ಹೆಣ್ಣಿನಿಂದಲೇ ಬರುವುದು ಎಂಬುದು ಕಾಕತಾಳೀಯವೂ ಇರಬಹುದು. ಆದರೆ ಅದು ಸುಳ್ಳೆಂಬುದು ನಂತರದ ವಿಷಯ. ಅದು ಏಕಾದರೂ ಸಮಾಜ ಒಳ್ಳೆಯ ಸಂಗತಿಗಳನ್ನು ಗಂಡಿಗೆ ಹೋಲಿಸಿ, ಕೆಟ್ಟ ಸಂಗತಿಗಳನ್ನು



**ಕಲೆ ಸಾಹಿತ್ಯ ವಿಜ್ಞಾನ : ಹೆಣ್ಣಿಗೆ ನೀಡಲಿ ಆಹ್ವಾನ**




ಸತ್ತರಂತೆ ಎಂಬ ಆಘಾತಕಾರಿ ಉದಾಹರಣೆಯನ್ನು ವಿವರಿಸಿದರು. ಹಲವು ಬಾರಿ ಪುರುಷರೂ ಸಹ ಸಮಾಜದ ಕೆಟ್ಟ ದೃಷ್ಟಿಕೋನಕ್ಕೆ ಗುರಿಯಾಗುತ್ತಾರೆ. ಆದರೆ ಸೋಂಕಿತ ಹೆಣ್ಣಿನಷ್ಟು ಆತಂಕ, ಖಿನ್ನತೆ, ಭಯ, ಜಿಗುಪ್ಸೆ, ನೋವು, ಸಮಸ್ಯೆಗಳಿಗೆ ಸೋಂಕಿತ ಪುರುಷ ಒಳಗಾಗುವುದಿಲ್ಲ ಎನ್ನುತ್ತಾರೆ ಹಿರಿಯ ಆರೋಗ್ಯ ಸಹಾಯಕರಾದ ಮಹೇಶ್ ಮೂರ್ತಿ. "ಇತ್ತೀಚೆಗೆ ಹೆಚ್.ಐ.ವಿ. ಸೋಂಕಿತರು ಸ್ವಲ್ಪಮಟ್ಟಿಗೆ ಮಾನಸಿಕ ಬದಲಾವಣೆ, ಯೋಚನೆ-ಭಾವನೆಗಳಲ್ಲಿ ಬದಲಾವಣೆಯನ್ನು ಕಂಡುಕೊಳ್ಳುತ್ತಿದ್ದಾರೆ. ಸೋಂಕಿರುವುದನ್ನು ಮರೆಮಾಚುವ ಪ್ರಯತ್ನವನ್ನು ಮೊದಲಿಗೆ ಮಾಡುತ್ತಾರೆ. ಸೋಂಕಿರುವ ಸಂಗತಿ ಜನರಿಗೆ ತಿಳಿದುಹೋದರೆ ಕೆಲವು ದಿನ ಯಾರನ್ನೂ ಮಾತನಾಡಿಸದೆ, ಯಾರಿಗೂ ಕಾಣಿಸಿಕೊಳ್ಳದಂತೆ ಮರೆಯಾಗಿರುತ್ತಾರೆ. ನಂತರ ಯಾವುದನ್ನೂ ಲೆಕ್ಕಿಸದೆ ಬದುಕಿನಲ್ಲಿ ಸ್ಥಿರತೆಯನ್ನು ಕಂಡುಕೊಳ್ಳುತ್ತಾರೆ. ಹೆಚ್.ಐ.ವಿ / ಏಡ್ಸ್ ಜಾಗೃತಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ. ಹೆಚ್ಚುಕಾಲ ಬದುಕಲು ಬೇಕಾಗಿರುವ ಮಾರ್ಗಗಳನ್ನು ಪರಿಪಾಲಿಸುತ್ತಾರೆ" ಎಂದಿದ್ದಾರೆ ಡಾಕ್ಟರ್.

ಹೆಣ್ಣಿಗೆ ಹೋಲಿಸುತ್ತಾರೋ ತಿಳಿಯದು. ಧೈರ್ಯ, ಸಾಧನೆ, ಸಾಹಸ, ಗೆಲುವಿನ ಸಂಗತಿಗಳು ಗಂಡಿಗೆ ಮೀಸಲು. ಅಳು, ಸೋಲು, ಭಯ, ಆತಂಕ, ಖಿನ್ನತೆಗಳು ಹೆಣ್ಣಿಗೆ ಸಂಬಂಧಿಸಿದ ಸಂಗತಿಗಳಾಗಿ ಮೀಸಲಾಗಿರುವುದನ್ನು ನೋಡಿದರೆ ಈ ಎಲ್ಲಾ ವಿಷಯಗಳನ್ನು ಪುನಃ ಒರೆಗೆ ಹಚ್ಚಿ ನೋಡಬೇಕಾದ ಪ್ರೇಮಯವಿದೆ. ಸತ್ಯಾಂಶವನ್ನು ತಿಳಿಯಬೇಕಾದ ಅಗತ್ಯವಿದೆ. ಯಾವ ವಿಷಯಗಳು ಸಮಾಜದ ಕಟ್ಟಳೆಯನ್ನು ಮೀರಿ ನಿಲ್ಲುವವೋ ಯಾವ ಸಂಗತಿಗಳು ಸಂಸ್ಕೃತಿಯನ್ನು ಧಿಕ್ಕರಿಸಿ ನಿಲ್ಲುವವೋ ಅವುಗಳೆಲ್ಲವೂ ಮಹಿಳೆಯರಿಂದಲೇ ಉದ್ಭವಿಸುತ್ತಿವೆ ಎಂಬ ಹಣೆಪಟ್ಟಿ ಹಚ್ಚುವ ರೂಢಿ ಸಮಾಜದಲ್ಲಿ ಬೆಳೆದು ನಿಂತಿದೆ. ಅಂತೆಯೇ ಏಡ್ಸ್ ರೋಗವೂ ಸಹ ಬಹುಮುಖ್ಯವಾಗಿ ಮುಕ್ತ ಲೈಂಗಿಕ ತೊಡಗುವಿಕೆಯಿಂದ ಹರಡುವ ವಿಷಯವಾಗಿದೆ. ಕಾರಣವಾಗಿ ಈ ವಿಷಯ ಭಾರತೀಯ ಸಂಸ್ಕೃತಿಗೆ ವಿರುದ್ಧ ವೆನಿಸುವುದರಲ್ಲಿ ಎರಡು ಮಾತಿಲ್ಲ.

ಡಾ. ಟಿ. ರಘುಕುಮಾರ್‌ರವರು ತಮ್ಮ ಸೇವಾವಧಿಯಲ್ಲಿ ನೂರಾರು ಹೆಚ್.ಐ.ವಿ. ಸೋಂಕಿತರನ್ನು ಹತ್ತಿರದಿಂದ ನೋಡಿದ್ದು, ಅವರಲ್ಲಿ ಪುರುಷ ಸೋಂಕಿತರಿಗಿಂತ ಮಹಿಳಾ ಸೋಂಕಿತರು ವಿಭಿನ್ನ ಹಾಗೂ ವಿಚಿತ್ರವಾದ ಸಾಂಸ್ಕೃತಿಕ, ಸಾಮಾಜಿಕ ಸಮಸ್ಯೆಗಳಿಗೆ ಒಳಗಾಗುತ್ತಾರೆಂದು ಅಭಿಪ್ರಾಯ ಪಡುತ್ತಾರೆ. ಸುಧಾ ಎಂಬ ಮಹಿಳೆಗೆ ಗಂಡನಿಂದಲೇ ಹೆಚ್.ಐ.ವಿ. ಸೋಂಕು ಹರಡಿದ್ದು, ಆಕೆಯನ್ನು ಮಾತ್ರ ಗ್ರಾಮದಿಂದ ಬಹಿಷ್ಕರಿಸಲಾಗಿತ್ತು. ಪತಿಯಾದವನು ಊರಿನಲ್ಲಿ ಆರಾಮವಾಗಿಯೇ ಓಡಾಡಿಕೊಂಡಿದ್ದ ಎಂಬ ಉದಾಹರಣೆ ಯನ್ನು ನೀಡಿದರು. ಹಾಗೆಯೇ ಲಲಿತ ಎಂಬ ಮಹಿಳೆ ಗಂಡನಿಂದಲೇ ಹೆಚ್.ಐ.ವಿ. ಸೋಂಕಿಗೆ ಒಳಗಾಗಿದ್ದು ಈಕೆ ಮಾತ್ರ ಗ್ರಾಮದ ದೇವಸ್ಥಾನ, ಕೆರೆ, ಕಟ್ಟೆ, ಪ್ರದೇಶಗಳಿಗೆ ಹೋಗುವಂತಿಲ್ಲ. ಪತಿಯಾದವನು ಎಲ್ಲಾ ಸ್ಥಳಗಳಿಗೂ ಹೋಗುತ್ತಾನೆ. ಅಂತೆಯೇ ಲಲಿತಾರವರಿಗೆ ಕುಟುಂಬದಲ್ಲಿ ಯಾವುದೇ ಸ್ಥಾನಮಾನವಿಲ್ಲ. ಪರಪುರುಷನ ಜೊತೆಗಿನ ಸಂಬಂಧದಿಂದ ಹೆಚ್.ಐ.ವಿ. ಸೋಂಕು ಈಕೆಗೆ ಹರಡಿದೆ ಎಂಬ ತೀರ್ಮಾನಕ್ಕೆ ಗ್ರಾಮದ ಜನರು ಬಂದಿದ್ದರು. ಈಕೆಯ ಪತಿಯನ್ನು ಯಾರೂ ದೂಷಿಸುತ್ತಿಲ್ಲ. ಹೆಚ್.ಐ.ವಿ. ಪರೀಕ್ಷೆಯ ಪ್ರಕಾರ ಗಂಡನಿಗೆ ಮೊದಲು ಈ ರೋಗ ಅಂಟಿರುವುದು ತಿಳಿದುಬಂದಿದೆ. ಮನೆಯಲ್ಲಿ ಎಲ್ಲಾ ಸದಸ್ಯರು ಲಲಿತಾರವರನ್ನು ತವರುಮನೆಗೆ ಕಳುಹಿಸಿ ಆಕೆಯ ಗಂಡನಿಗೆ ಮತ್ತೊಂದು ವಿವಾಹ ಮಾಡುವ ಯೋಚನೆಯಲ್ಲಿದ್ದರು. ಕಾರಣವಾಗಿ ಲಲಿತ ಇನ್ನು ತಾವು ಬದುಕಿರುವುದು ವ್ಯರ್ಥವೆಂದು ತಿಳಿದು ಆತ್ಮಹತ್ಯೆ ಮಾಡಿಕೊಂಡು

**ಕುಟುಂಬದವರ ಅಭಿಪ್ರಾಯಗಳ ವಿಶ್ಲೇಷಣೆ**

ಹೆಚ್.ಐ.ವಿ. ಸೋಂಕಿತರ ಕುಟುಂಬದವರು ಮಕ್ಕಳನ್ನು ಪ್ರೀತಿಯಿಂದ ಸಾಕಿ ಗಿಡುಗ ಕುಕ್ಕಿ ತಿನ್ನುವಂತಾಯಿತು ಎಂದು ಬೇಸರವನ್ನು ವ್ಯಕ್ತಪಡಿಸಿದರು. ಅತ್ಯಾಚಾರಕ್ಕೆ ಒಳಗಾದ ಸರೋಜ ಹಾಗೂ ಪವಿತ್ರರವರ ಕುಟುಂಬದಲ್ಲಿ ಅತ್ಯಾಚಾರದ ವಿಷಯ ತಿಳಿದ ಸಂಬಂಧಿಕರು ಹಾಗೂ ಊರಿನ ಜನರು ಅವರನ್ನು ಸಮಾಜದಿಂದ ಬಹಿಷ್ಕರಿಸುವ ಮಾತುಗಳ ಜೊತೆಗೆ "ಅವರ ಕುಟುಂಬದವರಾಗಿದ್ದಕ್ಕೆ ಮನೆಯಲ್ಲಾದರೂ ಇರಿಸಿಕೊಂಡಿದ್ದಾರೆ. ನಾನಾಗಿದ್ದರೆ ಇಂತಹ ಮಕ್ಕಳು ಇದ್ದರೆಷ್ಟು ಸತ್ತರೆಷ್ಟು ಎಂದು ನೇಣು ಹಾಕಿ ಸಾಯಿಸಿಬಿಡುತ್ತಿದ್ದೆ." ಎಂಬ ಪ್ರತಿಕ್ರಿಯೆಗಳನ್ನು ನೀಡಿದರು. ಇಲ್ಲಿ ಅತ್ಯಾಚಾರಿಯ ಬಗ್ಗೆ ಒಂದು ಮಾತಾದರೂ ಕೇಳಿಬರಲಿಲ್ಲ. ಮಹಿಳೆಯರ-ಹೆಣ್ಣುಮಕ್ಕಳ ಅಸಹಾಯಕತೆಯನ್ನು ಯಾರೂ ಪ್ರಶ್ನಿಸಲಿಲ್ಲ....

ಹೆಚ್ಚಿನ ಪ್ರಕರಣಗಳಲ್ಲಿ ಅತ್ತೆಯಾದವರು ಸೋಂಕಿತ ಮಹಿಳೆಯನ್ನು ದ್ವೇಷದ ಭಾವನೆಯಿಂದ ನೋಡಿರುವುದು ಕಂಡುಬಂದಿದ್ದರೂ ಸಹ ಇದಕ್ಕೆ ಕಾರಣ ಪಿತೃ ಪ್ರಾಧಾನ್ಯವು ಮಹಿಳೆಗೆ ಸಂಸ್ಕೃತಿಯ ಉಳಿವು ಹಾಗೂ ಕುಟುಂಬದ ಗೌರವ ಕಾಪಾಡುವ ಜವಾಬ್ದಾರಿ ನೀಡಿರುವುದೇ ಆಗಿದೆ. ವಿವಾಹವಾಗಿ ಪತಿಯಿಂದ HIV ಸೋಂಕು ಪಡೆದಿರುವ ಮಹಿಳೆಯರು ಪತ್ನಿಯನ್ನು ಕಳೆದುಕೊಂಡಿದ್ದಲ್ಲಿ ಕುಟುಂಬದ ಹಿರಿಯರು ಮಗನೇ ಹೋದಮೇಲೆ ಅವಳು ಯಾಕೆ ಬೇಕು ನಮಗೆ ಎಂದು ಹೇಳಿದ್ದಾರೆ. ಜೊತೆಗೆ ಆಕೆಯನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಮನೆಯಿಂದಾಚೆ ದೂಡಿದ್ದಾರೆ. ಅಧ್ಯಯನಕ್ಕೆ ಒಳಪಡಿಸಿದ ಶೇಕಡಾ 60-70ರಷ್ಟು ಕುಟುಂಬಗಳು HIV ಬಾಧಿತ ಮಹಿಳೆಯರನ್ನು ಮಕ್ಕಳ ಸಮೇತವಾಗಿ ಹೊರಗೆ ಹಾಕಿದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ಎಲ್ಲಿ ಪತಿಯು ಬದುಕಿದ್ದಾರೊ ಅಲ್ಲಿ ಮಾತ್ರ ಮಹಿಳೆಯರು ಪತಿಯ ಕುಟುಂಬದಲ್ಲಿ ಜೀವಿಸುತ್ತಿದ್ದಾರೆ. ಶಿಕ್ಷಣ ಪಡೆದಿರುವ ಕುಟುಂಬ ಗಳಲ್ಲಿಯೂ ಸೋಂಕಿತ ಮಹಿಳೆಗೆಂದು ತಟ್ಟೆ, ಲೋಟ, ಉಳಿದುಕೊಳ್ಳುವ ಸ್ಥಳವನ್ನು ನಿಗದಿ ಮಾಡಿರುವುದನ್ನು ಒಪ್ಪಿಕೊಂಡಿದ್ದಾರೆ. ಅವರು ಯಾವ ಸ್ಥಳದಲ್ಲಿ ಮಲಗುತ್ತಾರೆ ಎಂದು ಪ್ರಶ್ನೆ ಕೇಳಿದಾಗ ಸ್ಥಳವನ್ನು ತೋರಿಸಿ ಉತ್ತರಿಸಿದರು. ಆ ಸ್ಥಳದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಶೇ. 70ರಷ್ಟು ಮಹಿಳೆಯರ ತಟ್ಟೆ, ಲೋಟ, ಹೊದಿಕೆ, ಬಟ್ಟೆಗಳು ಕಂಡುಬಂದವು. ಆದರೆ ಅದೇ ಮನೆಯಲ್ಲಿ ಮಗನಿಗೂ HIV ಸೋಂಕಿದ್ದರೂ ಸಹ

ಅವರಿಗೆ ಈ ತೆರನಾದ ಪ್ರತ್ಯೇಕತೆ ಕಂಡುಬರಲಿಲ್ಲ. ಕುಟುಂಬದವರು ಲಿಂಗ ವ್ಯವಸ್ಥೆಯ ಅಸಮಾನತೆಯನ್ನು ಅಭಿವೃದ್ಧಿಪಡಿಸುವ ಕೇಂದ್ರ ಸ್ಥಳವೆಂಬುದು ಈ ಅಂಶದಿಂದ ಸಾಬೀತಾಗುತ್ತದೆ. ಕುಟುಂಬದಲ್ಲಿ ಉಳಿದಿರುವ HIV ಸೋಂಕಿತ ಮಹಿಳೆಯರನ್ನು ಮನೆಯಿಂದ ಹೊರಹಾಕುವ ತಂತ್ರಗಳಲ್ಲಿ ನಿರತರಾಗಿರುವುದೂ ಸಹ ಅಧ್ಯಯನದಿಂದ ತಿಳಿದು ಬಂದಿದೆ. ಹೆಜ್ಜೆ ಹೆಜ್ಜೆಗೂ ಬಾಧಿತ ಮಹಿಳೆಯರನ್ನು ಶೀಲದ ಬಗ್ಗೆ ದೂಷಿಸಿ, ಯಾವಾಗ ತೊಲಗುತ್ತದೋ ಈ ಪೀಡೆ ಎಂಬ ಮಾತುಗಳನ್ನು ಪದೇ ಪದೇ ಸಂದರ್ಶನದ ಸಮಯದಲ್ಲಿ ಹೇಳುತ್ತಿದ್ದುದು ಕಂಡುಬಂದಿತು. ಅವಳು ಮನೆ ಬಿಟ್ಟು ಹೋದರೆ ನನ್ನ ಮಗನಿಗೆ ಇನ್ನೊಂದು ವಿವಾಹ ಮಾಡುತ್ತೇನೆ ಎಂಬ ಅಭಿಪ್ರಾಯಗಳು ಅಧ್ಯಯನಕ್ಕೆ ದೊರೆತವು.

ಕುಟುಂಬವು ಸದಸ್ಯರುಗಳಿಗೆ ರಕ್ಷಣೆಯನ್ನು ಒದಗಿಸುವ ಕಾರ್ಯ ಮಾಡಬೇಕು. ಹೀಗಿರುವಾಗ ಕುಟುಂಬವೇ ವ್ಯಕ್ತಿಯನ್ನು ಹೊರಕ್ಕೆ ದೂಡಿದರೆ ಅವರ ಜೀವನದ ಪಾಡು ಏನಾಗಬೇಕು. ವಿವಾಹ ವಾಗಿದ್ದರಂತು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂದು ಅಲ್ಲಿಯೂ ಸಲ್ಲದ, ಪತಿಯ ಮನೆಯಲ್ಲಿ ಬದುಕಲೂ ಸಾಧ್ಯವಾಗದೆ ಸಂಕಷ್ಟಕ್ಕೆ ಮಹಿಳೆಯರೇ ಹೆಚ್ಚು ಸಿಲುಕಿದ್ದಾರೆ. ಸಮಾಜದಲ್ಲಿ ಮಹಿಳೆಯರ ಸ್ಥಿತಿ ಮಾತ್ರವೇ ಏಕೆ ಹೀಗಾಗಿದೆ? ಎಂಬುದು ಚರ್ಚಾ ವಿಷಯ. ಅವರಿಗೂ ಹುಟ್ಟಿದ ಸ್ಥಳ ಹಾಗೂ ಪತಿಯ ಸ್ಥಳದಲ್ಲಿ ಆಸ್ತಿಯನ್ನು ನೀಡಿದ್ದರೆ ಮಹಿಳೆಯರು ಈ ಬಗೆಯ ಮಾನಸಿಕ ಹಿಂಸೆ, ಸಾಮಾಜಿಕ ಸಮಸ್ಯೆಗಳಿಗೆ ಒಳಗಾಗುತ್ತಿರಲಿಲ್ಲವೆಂಬುವುದು ಸೂಕ್ತ ತೀರ್ಮಾನವಾಗಿದೆ. ಆರ್ಥಿಕವಾಗಿ ಮಹಿಳೆಯರು ಸದೃಢವಾದಷ್ಟು ಎಲ್ಲವೂ ಮಹಿಳೆಯ ಪಾಲಿಗೆ ವರವಾಗಿ ಪರಿಣಮಿಸುತ್ತವೆ. ಉತ್ತಮ ಸ್ಥಾನಮಾನವು ದೊರೆಯುತ್ತದೆ.

ಕುಟುಂಬದ ಸದಸ್ಯರುಗಳು ಹೆಚ್.ಐ.ವಿ. ಮಹಿಳಾ ಸೋಂಕಿತರನ್ನು ಕಡೆಗಣಿಸುತ್ತಿದ್ದಾರೆ. ಈ ಕಡೆಗಣಿಸುವಿಕೆಯೇ ಮಹಿಳೆಯಲ್ಲಿ ಬದುಕುವ ಆತ್ಮವಿಶ್ವಾಸವನ್ನು ಕಡಿಮೆ ಮಾಡಿದೆ. ಸೋಂಕಿತರಿಗೆ ಅಗತ್ಯವಾದ ಪೌಷ್ಠಿಕ ಆಹಾರಗಳನ್ನು ಒದಗಿಸುತ್ತಿಲ್ಲ. ಆಹಾರದ ವಿಷಯವಿರಲಿ ಸೋಂಕಿತರು ಬೇಗನೆ ಮರಣ ಹೊಂದಬಾರದೆ ಎಂದು ಆಶಿಸುತ್ತಿರುವವರ ಸಂಖ್ಯೆಯೇ ಹೆಚ್ಚಾಗಿದೆ. ಸೋಂಕಿತ ಮಹಿಳೆಯರು ಮನೆಯಲ್ಲಿ ಕುಳಿತರೂ ತಪ್ಪು, ನಿಂತರೂ ತಪ್ಪು, ಊಟ ಮಾಡಿದರೂ ತಪ್ಪು ಕೊನೆಗೆ ಯಾರನ್ನು ಮಾತನಾಡಿಸಿದರೂ ತಪ್ಪು. ಸ್ವ ಸ್ಥಳಕ್ಕೆ ಹಿಂದಿರುಗಿರುವವರೇ ಸ್ವಲ್ಪವಾದರೂ ಮಾನಸಿಕ ನೆಮ್ಮದಿಯಿಂದ ಬದುಕುತ್ತಿದ್ದಾರೆ ಎಂಬುವುದು ಪ್ರಕರಣಗಳ ವಿವರಣೆಯಿಂದ ತಿಳಿದು ಬರುತ್ತದೆ. ಕುಟುಂಬದವರು ಹೆಚ್.ಐ.ವಿ. ಸೋಂಕಿತ ಮಹಿಳೆಯರನ್ನು ಮನೆಯಲ್ಲಿರಿಸಿಕೊಳ್ಳಲು ಇಷ್ಟಪಡುತ್ತಿಲ್ಲ. ಬೆರಳೆಣಿಕೆಯಷ್ಟು ಜನರು ಸೋಂಕಿತ ಮಹಿಳೆಯರನ್ನು ಕಾಳಜಿಯಿಂದ ನೋಡಿಕೊಳ್ಳುತ್ತಿದ್ದಾರೆ. ಪ್ರೀತಿಯನ್ನು ತೋರಿಸುತ್ತಿದ್ದಾರೆ. ಇಂತಹ ಪ್ರೀತಿ ಎಲ್ಲಾ ಬಾಧಿತರಿಗೂ ದೊರೆತರೆ ಹೆಚ್.ಐ.ವಿ. ಸೋಂಕಿತರ ಆತ್ಮಹತ್ಯೆ, ಮಾನಸಿಕ ಅಸ್ವಸ್ಥತೆಯನ್ನು ಕಳಂಕ, ಭೇದ ಭಾವವನ್ನು ತಟ್ಟೆಗಟ್ಟಬಹು ದಾಗಿದೆ. 10–12 ಕುಟುಂಬಗಳ ಸದಸ್ಯರು ಮಹಿಳೆಯನ್ನೇ "ಅವಳು ಕೆಟ್ಟು ನಿಂತಿರುವವಳು ಯಾವ ಗಂಡಸಿಗೂ ಹೆದರುವುದಿಲ್ಲ, ಯಾವ ಗಂಡಸಿಗೂ ಕಡಿಮೆಯಿಲ್ಲ" ಎಂದು ದೂಷಿಸಿದರು. ಆದರೆ ಅದರಲ್ಲಿ ಕೆಲವು ಮಹಿಳೆಯರು ಮುಕ್ತ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿದ್ದ ರೆಂಬುದು ಸಾರ್ವಜನಿಕರಿಂದ ತಿಳಿದು ಬಂದಿದೆ.

ಒಟ್ಟಾರೆ ಹೇಳುವುದಾದರೆ ಸೋಂಕಿತರ ಕುಟುಂಬದವರು ಮಹಿಳೆಯರ ಮೇಲೆ ಒಳ್ಳೆಯ ಅಭಿಪ್ರಾಯವನ್ನು ಹೊಂದಿಲ್ಲ. ಹಾಗೂ ಸೋಂಕಿತ ಮಹಿಳೆಯರನ್ನು ಮಾನಸಿಕವಾಗಿ ಹಿಂಸಿಸಿ ಅವರನ್ನು ಆತ್ಮಹತ್ಯೆ ಮಾಡಿಕೊಳ್ಳಲು ಪೂರಕವೆಂಬಂತೆ ಆರ್ಥಿಕವಾಗಿ ನಡೆಸಿಕೊಳ್ಳುತ್ತಿರುವುದು ಕುಟುಂಬಗಳ ಅಧ್ಯಯನದಿಂದ ತಿಳಿದುಬಂದಿದೆ. ಕುಟುಂಬದಲ್ಲಿನ ಒಬ್ಬೊಬ್ಬ ಸದಸ್ಯರೂ ಸಹ ಅವರ ಮನಸ್ಸಿಗೆ ಬಂದಂತೆ ಸೋಂಕಿತ ಮಹಿಳೆಯರನ್ನು

## ಕೈ ಹಿಡಿದು ನಡೆಸುವವಳು

ಹೆಣ್ಣು ಹುಟ್ಟಿತೆಂದು ಮುರಿಯದಿರಿ ಮೂಗು
ಅವಳು ಪ್ರಕೃತಿಯ ಬಳುಕು - ಬಾಗು
ಅಯ್ಯೋ ಕೆಟ್ಟೆವೆಂದು ಹಾಕದಿರಿ ಕೂಗು
ಕೈಹಿಡಿದು ನಡೆಸುವಳು ನಿಮ್ಮ ಬದುಕು.
ವಸ್ತ್ರ - ಆಡಂಬರ ಹೆಣ್ಣಿಗೆ ಕಲಿಸಬೇಡಿ
ವಿದ್ಯೆ - ವಿಜ್ಞಾನ ಎರಡು ಕಣ್ಣ ಜೋಡಿ
ಜ್ಞಾನ - ತಿಳಿವಿನ ಬೆಳಕ ನೀವು ನೀಡಿ
ಎಲ್ಲರನು ಮೀರಿಸುವಳು ಆಗ ನೋಡಿ
ನಾಲ್ಕು ಗೋಡೆಯ ನಡುವೆ ಬಂಧಿಸಿಡಬೇಡಿ
ಮದುವೆ - ವರದಕ್ಷಿಣೆ ಹೇರಬೇಡಿ
ಹೆಣ್ಣು ಮಗುವೆಂದು ತೆಗಳಬೇಡಿ
ಆಕೆ ನಮ್ಮೆಲ್ಲರ ಜೀವನಾಡಿ
ಗಂಡನಾಗಿರುವವನು ಆಗದಿರಲಿ ಗಂಡಾಂತರ
ಸ್ನೇಹಿತನಾಗಿ ಆಗು ನೀ ರೂಪಾಂತರ
ಹೆಣ್ಣು ನಿನಗೆ ಸಮ ಸಮಾನಾಂತರ
ಆಗ ಹೂ ಬಿಡುವುದು ಬಾಳಿನ ಹಂದರ.
ಕನಸಕಟ್ಟಲಿ ಅವಳು ಬದುಕಿನಲ್ಲಿ
ಬೆಳಕನೀಡಲಿ ಅವಳು ಸ್ವಜ್ಞಾನದಲ್ಲಿ
ತನ್ನ ಸಂಕೋಲೆಗಳ ತ್ಯಜಿಸಿ ಬರಲಿ
ದೇಶದೇಳಿಗೆಯಲ್ಲಿ ಕೈಯ ಕೂಡಿಸಲಿ

■ **ಎಸ್. ಮಾಲತಿ**



ಹಿಂಸೆಗೆ ಒಳಪಡಿಸುತ್ತಿದ್ದಾರೆ. ಇದರಿಂದಾಗಿ ಮಹಿಳೆಯರು ಖಿನ್ನತೆ, ಆತಂಕವನ್ನು ಎದುರಿಸುತ್ತಿದ್ದಾರೆ. ಕಾರಣವಾಗಿ ಆತ್ಮಹತ್ಯೆಗೂ ಯತ್ನಿಸಿ ಸಾವನ್ನು ಸ್ವಪ್ರೇರಣೆಯಿಂದ ಅಪ್ಪಿಕೊಳ್ಳುತ್ತಿದ್ದಾರೆ.

ಕುಟುಂಬದ ಸದಸ್ಯರು HIV ಸೋಂಕಿತ ಮಹಿಳೆಯರನ್ನು ಕುಟುಂಬದಿಂದ ಬಹಿಷ್ಕರಿಸುತ್ತಿದ್ದು, ಆರ್ಥಿಕವಾಗಿಯೂ ಅವರಿಗೆ ಯಾವುದೇ ನೆರವನ್ನು ಒದಗಿಸುತ್ತಿಲ್ಲ. ಮನೆಯಿಂದ ದೂಡಲ್ಪಟ್ಟು ಮಹಿಳೆಯರು ಸ್ವತಂತ್ರವಾಗಿ ಬದುಕುತ್ತಿದ್ದರೂ ಸಹ ಆರ್ಥಿಕವಾಗಿ, ಸಾಮಾಜಿಕವಾಗಿ, ದೈಹಿಕವಾಗಿ, ಮಾನಸಿಕವಾಗಿ ಸಮಸ್ಯೆಗೊಳಗಾಗುತ್ತಿರುವ ಅಂಶಗಳಲ್ಲಿ ಯಾವುದೇ ಬದಲಾವಣೆ ಕಂಡುಬಂದಿಲ್ಲ. ಕೆಲವೊಮ್ಮೆ ಊರಿನಿಂದಲೂ ಬಹಿಷ್ಕರಿಸಲ್ಪಟ್ಟ ದುರಂತವನ್ನು ಪ್ರಕರಣಗಳ ಅಧ್ಯಯನಗಳಿಂದ ತಿಳಿಯಬಹುದಾಗಿದೆ. 'ನಾವು ಅವಳನ್ನು ಮುಟ್ಟಿಸಿಕೊಳ್ಳುವುದಿಲ್ಲ. ಅವಳ ಬಾಚಣಿಗೆಯನ್ನು ಉಪಯೋಗಿಸುವುದಿಲ್ಲ. ಅವಳಿಗಾಗಿ ಬಕೆಟ್, ಜಗ್ಗು, ತಟ್ಟೆ, ಲೋಟ, ಹೊದಿಕೆಗಳನ್ನು ಪ್ರತ್ಯೇಕ ಮಾಡಿದ್ದೇವೆ' ಎಂಬ ಮಾಹಿತಿಗಳನ್ನು ಕುಟುಂಬಗಳ ಸದಸ್ಯರೇ ಮುಕ್ತವಾಗಿ ನನ್ನೊಡನೆ ಹಂಚಿಕೊಂಡಿದ್ದಾರೆ. ಕುಟುಂಬವೆಂಬುವುದು ಪ್ರೀತಿ ಸ್ನೇಹಗಳ ತಾಣವಾಗಿರಬೇಕು. ಸದಸ್ಯರನ್ನು ಸಾಧನೆ ಬಗೆಗೆ ಉತ್ತೇಜಿಸುವ, ಸದಸ್ಯರುಗಳಿಗೆ ನೆಮ್ಮದಿ ನೀಡುವ ಸಂಸ್ಥೆಯಾಗಬೇಕು. ಎಷ್ಟೇ ಜನ್ಮದಲ್ಲೂ ಅದೇ ಕುಟುಂಬದಲ್ಲಿ ಜನಿಸಬೇಕು ಎಂಬ ಆಸೆಯನ್ನು ಮೂಡಿಸುವ ಹಾಗೆ ಕುಟುಂಬಗಳು ಸದಸ್ಯರನ್ನು ನೋಡಿಕೊಳ್ಳಬೇಕು. ಆದರೆ ಹೆಚ್.ಐ.ವಿ. ಸೋಂಕಿತ ಮಹಿಳೆಯರಿಗೆ ಇಂತಹ ಕುಟುಂಬಗಳು ಚಳಿಗಾಲದಲ್ಲಿ ಬೆಚ್ಚನೆಯ ಗೂಡಾಗಿರದೆ, ಕೊರೆಯುವ-ರಕ್ತ ಹೆಪ್ಪುಗಟ್ಟುವ ಹಿಮವಾಗಿದೆ. ಉರಿಬಿಸಿಲಲ್ಲಿ ತಂಪೆರೆಯದೆ ಕಡುಬಿಸಿಯ ತಾಪವನ್ನು ಸೂಸಿದೆ. ಹೆಚ್.ಐ.ವಿ. ಸೋಂಕಿತ ಮಹಿಳೆಗೆ ವಿವಾಹ, ಕುಟುಂಬ, ಪತಿ, ಮಕ್ಕಳು ಸಂಬಂಧಿಕರು ಯಾವುದೂ ಬೇಡವೆನ್ನುವಷ್ಟು ಬೇಸರ ವ್ಯಕ್ತವಾಗಿದೆ.

ಪುರುಷರ ಪರವಿರುವ ಸಾಮಾಜೀಕರಣ ಪ್ರಕ್ರಿಯೆ, ಪುರುಷ ಪ್ರಧಾನ ವ್ಯವಸ್ಥೆಗಳು, ಧೋರಣೆಗಳು ಮಹಿಳಾ ಆರೋಗ್ಯವನ್ನು ಪ್ರತಿನಿಧಿಸುತ್ತಿಲ್ಲ. ಬದಲಾಗಿ ಮಹಿಳಾ ಸಮುದಾಯವನ್ನು ಆರೋಗ್ಯದ ದೃಷ್ಟಿಯಿಂದಲೂ ಎರಡನೇ ದರ್ಜೆಗೆ ದೂಡಲ್ಪಟ್ಟಿರುವುದು. ಅಧ್ಯಯನದಿಂದ ಪ್ರತಿಫಲಿಸುವ ಉತ್ತರಾಂಶವಾಗಿದೆ. ಕುಟುಂಬಗಳು, ಸಾರ್ವಜನಿಕರು, ಸಮಾಜವು, ಹೆಚ್.ಐ.ವಿ. ಸೋಂಕಿತ ಮಹಿಳೆಯರನ್ನು ಮಾತ್ರ ಸಮಾಜಕ್ಕೆ ಕಳಂಕ, ಕುಟುಂಬಕ್ಕೆ ಕಳಂಕ ಎಂದು ಪರಿಭಾವಿಸುವ ಪರಿಯು ಲಿಂಗ ಅಸಮಾನತೆಯ ಸ್ಥಿತಿಯನ್ನು ಸ್ಪಷ್ಟಗೊಳಿಸುತ್ತದೆ.

ಒಟ್ಟಾರೆಯಾಗಿ ಅನಾರೋಗ್ಯದೊಂದು ಭಾಗವಾದ HIV/AIDS ಸೋಂಕು ಸಮಾಜದ ಅನಾರೋಗ್ಯ, ಕುಟುಂಬದ ಅನಾರೋಗ್ಯ/ವಿಘಟನೆಗೆ ಕಾರಣವಾಗುತ್ತಿದೆ. ಕ್ಷೇತ್ರಕಾರ್ಯದ ಮೂಲಕ ನಾವು ಕಂಡುಕೊಂಡಿದ್ದೇವೆ. ತಮ್ಮದಲ್ಲದ ತಪ್ಪಿಗೆ ಈ ಸೋಂಕಿನಿಂದ ಮಹಿಳೆಯರು ಸಮಸ್ಯೆಗಳಿಗೆ ಈಡಾಗುತ್ತಿದ್ದಾರೆ ಎಂಬುದನ್ನು ಅಧ್ಯಯನವು ವಿವರಿಸಿದೆ. ಸೋಂಕಿತ ಮಹಿಳೆಯರು ಸೋಂಕಿನ ಬಗ್ಗೆ ಹೆಚ್ಚು ಜಾಗೃತರಾಗಬೇಕು. ಸಮಾಜವು ಹೊರಿಸುವ ಕಳಂಕ, ಭೇದಭಾವವನ್ನು ಎದುರಿಸಿ ನಿಲ್ಲುವ ಚೈತನ್ಯವನ್ನು ತುಂಬಿಕೊಳ್ಳಬೇಕು. ಬಾಧಿತರು ಹೆಚ್ಚು ಕಾಲ ಬದುಕುವ ಮಾರ್ಗಗಳನ್ನು ಕಂಡುಕೊಳ್ಳಬೇಕು. ಎಲ್ಲ ರೋಗಗಳ ಹಾಗೆ ಇದೂ ಒಂದು ಎಂದು ಪರಿಭಾವಿಸಬೇಕು. ವೈದ್ಯರು, ಆಪ್ತ ಸಮಾಲೋಚಕರ ಹೇಳಿಕೆಯಂತೆ ನಡೆಯಬೇಕು. ಮುಕ್ತ ಲೈಂಗಿಕ ಪ್ರವೃತ್ತಿಯನ್ನು ದೂರವಿಡಬೇಕು. ಈ ಸಮಯದಲ್ಲಿ ಆತ್ಮಸ್ಥೈರ್ಯ, ಮಾನಸಿಕ ನೆಮ್ಮದಿ ಬಹಳ ಮುಖ್ಯ ಎಂದು ಮನಗಾಣಬೇಕು. ಸಮಾಜ ಹಾಗೂ ಕುಟುಂಬಗಳು HIV/AIDS ಬಾಧಿತ ಮಹಿಳೆಯರನ್ನು ಮಾನವೀಯ ದೃಷ್ಟಿಯಿಂದ ಕಾಣಬೇಕು. ❑

**ಗಂಡ - ಹೆಂಡತಿ ಜೋಡಿ : ನಡೆಯಿರಿ ಕೂಡಿ ಕೂಡಿ**

# ನಮ್ಮ ಬದುಕು

ಹೋರಾಟದ ಬದುಕು ನಮ್ಮದು
ನಮ್ಮನ್ಯಾಕೆ ಕಾಡುವಿರೋ?
ವಿದ್ಯೆ ಕೊಡಲಿಲ್ಲ, ಬುದ್ಧಿಕೊಡಲಿಲ್ಲ
ತ್ಯಾಗ-ಪ್ರೀತಿ ಬೇಡುವಿರೋ....
ಮೈಯಮುರಿಯ ಹೊಲದ ದುಡಿತ
ಮನೆಯ ಒಳಗೆ ಪತಿಯ ಕುಡಿತ
ಬಾಸುಂಡೆ ಬರುವ ಬಡಿತ
ತಿಂಬ ಅನ್ನದಲ್ಲೂ ಕಡಿತ ||ನಮ್ಮನ್ಯಾಕೆ ಕಾಡುವಿರೋ||

ದುಡಿತಕಿಲ್ಲ ಸಮಾನ ಕೂಲಿ
ನಮ್ಮ ಕಷ್ಟಕಿಲ್ಲ ಬೇಲಿ
ಮೈಯ ನರನರವ್ವೂ ಧೂಳಿ
ಕರೆವಿರೇಕೆ ನನ್ನ ಕಾಳಿ? ||ನಮ್ಮನ್ಯಾಕೆ ಕಾಡುವಿರೋ||

ವರದಕ್ಷಿಣೆ ಕೇಳುವಿರೋ
ನಗನಾಣ್ಯ ಬೇಡುವಿರೋ
ನಿಮ್ಮ ದುರಾಸೆ ತೀರದಿರೆ
ಬೆಂಕಿ ಹಾಕಿ ಸುಡುವಿರೋ ||ನಮ್ಮನ್ಯಾಕೆ ಕಾಡುವಿರೋ||

ಇನ್ನೂ ಆಟ ಆಡುವಾಗ
ಎಳೆತಂದು ಮದುವೆ ಮಾಡುವಿರೋ
ಮಗುವ ಮೇಲೆ ಮಗು ಹಡೆದರೂ
ಗಂಡಿಗಾಗಿ ಕಾಯುವಿರೋ ||ನಮ್ಮನ್ಯಾಕೆ ಕಾಡುವಿರೋ||

ವಿದ್ಯೆ ಕೊಡಿ, ಬುದ್ಧಿಕೊಡಿ
ಆಸ್ತಿಯಲ್ಲಿ ಹಕ್ಕು ಕೊಡಿ
ವಿಜ್ಞಾನ, ತಂತ್ರಜ್ಞಾನ, ವ್ಯಾಪಾರ, ಶಿಕ್ಷಣ
ಮುನ್ನಡೆವೆವು ಹೇಗೆ ನೋಡಿ ||ನಮ್ಮನ್ಯಾಕೆ ಕಾಡುವಿರೋ||

■ ಎಸ್. ಮಾಲತಿ





# ಸ್ವ ಪ್ರಜ್ಞೆ ಮತ್ತು ಆತ್ಮ ಘನತೆಯ ಹಂಬಲ

■ ಸಬಿತಾ ಬನ್ನಾಡಿ

"ನಡುವೆ ಸುಳಿವ ಆತ್ಮ" ಆಶಾದೇವಿಯವರ ಎರಡನೆಯ ವಿಮರ್ಶಾ ಸಂಕಲನ. ತಮ್ಮ ಮೊದಲನೆಯ ಸಂಕಲನದಲ್ಲಿ 'ಸ್ತ್ರೀ ಮತವನುತ್ತರಿಸಲಾಗದೇ?' ಎಂಬ ಪ್ರಶ್ನೆಯನ್ನು ಇಟ್ಟರೆ, ಎರಡನೆಯ ಸಂಕಲನದಲ್ಲಿ ಅದಕ್ಕೆ ಉತ್ತರವೆಂಬಂತೆ 'ನಡುವೆ ಸುಳಿವ ಆತ್ಮ'ಕ್ಕೆ ಇಲ್ಲದ ಲಿಂಗಭೇದ ಬದುಕಿನಲ್ಲೂ ಬೇಡ ಎಂಬ ಸೂಚನೆಯನ್ನು ಕೊಡುತ್ತಾರೆ.

ಸಮಕಾಲೀನ ಕನ್ನಡ ವಿಮರ್ಶಾ ಲೋಕದಲ್ಲಿ ಬರೆಯುತ್ತಿರುವ ವಿಮರ್ಶಕಿಯರ ಬರಹಗಳೆಡೆಗೆ ಒಂದು ನೋಟ ಹರಿಸಿದರೆ, ಅವರೆಲ್ಲರೂ ಸ್ತ್ರೀವಾದವನ್ನೇ ಮೂಲ ಭಿತ್ತಿಯನ್ನಾಗಿಸಿಕೊಂಡಿರುವುದು ಮೇಲ್ನೋಟಕ್ಕೇ ಕಂಡು ಬರುತ್ತದೆ. ಇದು ಅವರ ಆಯ್ಕೆ ಅನ್ನುವುದಕ್ಕಿಂತಲೂ ಆದ್ಯತೆ ಎಂಬುದೇ ಹೆಚ್ಚು ಸರಿಯಾದ ಮಾತೆನಿಸುತ್ತದೆ. ಯಾಕೆಂದರೆ ಸ್ತ್ರೀ ಹೊಸ ಪ್ರಜ್ಞೆಯೊಂದಿಗೆ ತನ್ನ ಹೊರ ಜಗತ್ತನ್ನು ಮತ್ತು ಒಳ ಜಗತ್ತನ್ನು ಶೋಧಿಸಿಕೊಳ್ಳುತ್ತಿರುವ ಕಾಲ ಇದಾಗಿದ್ದು ಅವಳನ್ನು ವಂಚಿಸಿದ ನಾನಾ ಮಾದರಿಗಳು ಅವಳಿಗೆ ಈ ಮೂಲಕ ಗೋಚರವಾಗುತ್ತಿರುವ ಕಾಲವೂ ಇದಾಗಿದೆ. ಹೆಣ್ಣಿನ ನಿರ್ವಚನೆಯು ಮನುಷ್ಯ ನಿರ್ವಚನೆಯೊಳಗೇ ಮಿಳಿತವಾಗುವ ತನಕವೂ ಅವರು ಈ ಕೆಲಸವನ್ನು ನಿರ್ವಹಿಸುತ್ತಲೇ ಇರಬೇಕಾಗಿರುವುದು ಅವರಿಗೆ ಅನಿವಾರ್ಯವಾಗಿಬಿಟ್ಟಿದೆ. ಈ ಜವಾಬ್ದಾರಿಯನ್ನು ಆಶಾ ಕೂಡ ಹೊತ್ತುಕೊಂಡಿದ್ದಾರೆ.

ಆಶಾ ತಮ್ಮ ಈ ಸಂಕಲನದಲ್ಲಿ ಮೂರು ರೀತಿಯ ಬರಹಗಳನ್ನು ಸಂಕಲಿಸಿಕೊಟ್ಟಿದ್ದಾರೆ. ಲೇಖಕರ ಕೃತಿಜಗತ್ತಿನಲ್ಲಿ ರೂಪುಗೊಂಡ ಮಹಿಳೆ, ಲೇಖಕಿಯರು ಎದುರುಗೊಂಡ ಮಹಿಳಾ ಜಗತ್ತು ಮತ್ತು ಸ್ತ್ರೀ ನೆಲೆಯನ್ನು ಅರಿಯುವ ತಾತ್ತ್ವಿಕತೆಯ ಅನುಸಂಧಾನಗಳನ್ನು ಇಲ್ಲಿ ಕಾಣಬಹುದಾಗಿದೆ. ಈ ಕೃತಿಗೆ ಕೊಟ್ಟಿರುವ ಉಪ ಶೀರ್ಷಿಕೆಯಾದ 'ಸ್ತ್ರೀ ಸಂಕಥನದ ಚಹರೆಗಳು' ಎಂಬುದನ್ನು ಸಮರ್ಥಿಸುವಂತೆ ಕೃತಿಯುದ್ದಕ್ಕೂ ಸ್ತ್ರೀ ಗ್ರಹಿಕೆಯ ವಿಭಿನ್ನ ಮಾದರಿಗಳ ಶೋಧವನ್ನು ಮಾಡಲಾಗಿದೆ.

ಆಶಾರಿಗೆ ಲೇಖಕರ ಮೂಲಕ ಕೃತಿಯನ್ನು ನೋಡುವ ಆಸಕ್ತಿಯಿಲ್ಲ. ಬದಲಿಗೆ ಕೃತಿಯ ಮೂಲಕ ಲೇಖಕರನ್ನು ಅರಿಯುವೆಡೆಗೆ ಅವರ ನಡೆಯಿದೆ. ಹಾಗೆಯೇ ಜಗತ್ತಿನ ಮೂಲಕ ಕೃತಿಯೊಳಗೆ ಪ್ರವೇಶ ಪಡೆಯುವುದಕ್ಕಿಂತಲೂ ಕೃತಿಜಗತ್ತಿನ ಮೂಲಕ ಜಗತ್ತಿನ ನಿಜಗಳನ್ನು ಅನಾವರಣ ಮಾಡುವ ಉಮೇದು ಹೆಚ್ಚು ಕಾಣುತ್ತದೆ. ಸ್ತ್ರೀ ಸ್ವಾಯತ್ತತೆಯು ಬಾಹ್ಯದಿಂದಷ್ಟೇ ಲಭ್ಯವಲ್ಲ, ಆಂತರಂಗಿಕ ಸ್ವ ಪ್ರಜ್ಞೆಯ ಅರಿವಿಲ್ಲದೇ ಇದು ಸಾಧ್ಯವಿಲ್ಲ ಎಂಬ ನಂಬಿಕೆಯು ಖಚಿತವಾಗಿ ಆಶಾರ ಚಿಂತನೆಯನ್ನು ರೂಪಿಸಿದೆ. ಹೀಗಾಗಿ, ಸ್ತ್ರೀ ಸತ್ವದ ಅರಿವಿನೊಂದಿಗೆ ಪ್ರತಿರೋಧದ ಹೆಜ್ಜೆಯಿಡುವ ವ್ಯಕ್ತಿತ್ವಗಳೆಡೆಗೆ ಅವರಿಗೊಂದು ಸೆಳೆತವಿದೆ. ಅಪ್ಪಟ ಆಧುನಿಕ ಹೆಣ್ಣು ಸೀತೆ ಎಂಬ ಅವರ ಲೇಖನದಲ್ಲಿ ಇದನ್ನು ಗುರುತಿಸಬಹುದು. ಹಾಗೆಯೇ ರಾಧೆಯ ಕುರಿತಾದ ಬರಹದಲ್ಲೂ ಇದನ್ನು ಕಾಣಬಹುದು. ಲಲ್ಲೇಶ್ವರಿ, ಅಕ್ಕಮಹಾದೇವಿಯರನ್ನು ಆದಿಮ ಪ್ರತೀಕಗಳಾಗಿ ಕಾಣುವುದೂ ಈ ಕಾರಣಕ್ಕೇ. ಹೀಗೆ, ಪಾರಂಪರಿಕ ಜ್ಞಾನ ಸರಪಣಿಯೊಂದಿಗೆ ಪಾಶ್ಚಾತ್ಯ ಸ್ತ್ರೀವಾದೀ ತಾತ್ತ್ವಿಕತೆಯನ್ನೂ ಬೆಸೆಯುತ್ತಾ ತಾವು ಬರೆಯುವ ವಿಮರ್ಶೆಯನ್ನು ಪ್ರತಿರೋಧದ ಒಂದು ಎಳೆಯನ್ನಾಗಿಸುವ ಕ್ರಮವೊಂದನ್ನು ಅವರ ಬರವಣಿಗೆಯಲ್ಲಿ ಗಮನಿಸಬಹುದು.

ಕನ್ನಡದ ಪ್ರಮುಖ ಲೇಖಕರಾದ ಬೇಂದ್ರೆ, ಕುವೆಂಪು, ಕಾರಂತ, ರಾಜರತ್ನಂ, ಲಂಕೇಶ್, ತೇಜಸ್ವಿಯವರ ಬರಹಗಳಲ್ಲಿನ ಮಹಿಳೆಯರ ಲೋಕದ ಪರಿಶೀಲನೆಯನ್ನು ಇಲ್ಲಿ ಮಾಡಲಾಗಿದೆ. ಹಾಗೆ ನೋಡಿದರೆ ಕನ್ನಡದ ಪ್ರಮುಖ ಲೇಖಕರು ಬಹಳ ಭಿನ್ನ ನೆಲೆಗಳಲ್ಲಿ ಸ್ತ್ರೀಜಗತ್ತಿಗೆ ಮುಖಾಮುಖಿಯಾಗಿದ್ದಾರೆ. ಅಂತಃಕರಣದ, ಆರಾಧನೆಯ, ಸಂಭ್ರಮದ ಹೀಗೆ ಹಲವು ಭಾವಗಳ ಸಂಗಮಗಳು ಇಲ್ಲಿ ಸಂಭವಿಸಿವೆ. ಅರಿವಿದ್ದೋ ಇಲ್ಲದೆಯೋ ಇಲ್ಲಿ ಹೆಣ್ಣಿಗೆ ಕೆಲವು ಸೂಚನೆಗಳು ದಾಟಿಕೊಂಡಿವೆ. ಆಶಾ ಚರ್ಚೆಗೆ ಎತ್ತಿಕೊಂಡಿರುವ ಆರು ಜನ ಲೇಖಕರೂ ಸ್ತ್ರೀಯನ್ನು ಬದುಕಿನ ಭಾಗವಾಗಿ ಗೌರವದೊಂದಿಗೆ ಸ್ವೀಕರಿಸುತ್ತಲೇ,ತಮ್ಮದೇ ಸ್ತ್ರೀ ಮಾದರಿಗಳನ್ನು ಸೃಷ್ಟಿಸಿಕೊಟ್ಟಿದ್ದಾರೆ. ಅವರು ರೂಪಿಸಿಕೊಡುವ ಸ್ತ್ರೀ ಮಾದರಿಯ ಭಿನ್ನ ನೆಲೆಗಳನ್ನು ಸಮರ್ಥವಾಗಿ ಶೋಧಿಸುವ ಕೆಲಸವನ್ನು ಇಲ್ಲಿ ಮಾಡಲಾಗಿದೆ. ಲಂಕೇಶರಲ್ಲಿ ಚಿತ್ರಿತವಾಗುವ ಸ್ತ್ರೀ ಬಿಡುಗಡೆಯೆಡೆಗೆ

ಜಿ.ಎಸ್.ಎಸ್. ವಿಶ್ವಸ್ತ ಮಂಡಳಿಯ ಪ್ರತಿಷ್ಠಿತ **ಜಿ.ಎಸ್.ಎಸ್. ಪ್ರಶಸಿಯನ್ನು** ಡಾ. ಎಂ.ಎಸ್. ಆಶಾದೇವಿ ಅವರಿಗೆ 7-2-2012ರಂದು ಪ್ರದಾನ ಮಾಡಲಾಯಿತು. ಆಶಾದೇವಿ ಅವರನ್ನು ಮಾನಸ ಅಭಿನಂದಿಸುತ್ತದೆ.



**ನಡುವೆ ಸುಳಿವ ಆತ್ಮ (ಸ್ತ್ರೀ ಸಂಕಲನ ಚಹರೆಗಳು)** ಲೇ: ಎಂ.ಎಸ್. ಆಶಾದೇವಿ, ಪ್ರ: ಅಹರ್ನಿಶಿ ಪ್ರಕಾಶನ, ಪು: 152, ಬೆಲೆ: ರೂ. 105/-

ಪಯಣ ಮಾಡುವುದನ್ನು, ಮತ್ತದು ನಮ್ಮ ನಡೆಯಾಗಬೇಕಿರುವುದನ್ನು ಪರಿಶೀಲಿಸುವ ಲೇಖಕಿ ತೇಜಸ್ವಿಯವರಲ್ಲಿ ಈ ಸ್ಪಷ್ಟತೆ ಕಾಣುವುದಿಲ್ಲ ಎನ್ನುತ್ತಾರೆ. "ಇಲ್ಲಿನ ಪಾತ್ರಗಳು ಗಯ್ಯಾಳಿಗಳು ಪದದ ಅರ್ಥ ವ್ಯಾಪ್ತಿಯಲ್ಲಿ ಪಲ್ಲಟವನ್ನು ತರುವಲ್ಲಿ ಯಶಸ್ವಿಯಾಗುತ್ತವೆ ಎಂದು ಹೇಳಲಾಗುವುದಿಲ್ಲ."(ಪು.67) ಎನ್ನುತ್ತಾರೆ. ಕಿರಗೂರಿನ ಗಂಡಸರು ಕಾರಣವೇ ಇಲ್ಲದೇ ರಾತ್ರಿಯಿಡೀ ಪೊಲೀಸ್‌ಸ್ಟೇಷನ್‌ನಲ್ಲಿ ಕಾಲಕಳೆಯುವಂತೆ, ಹೆಂಗಸರು ವಿನಾಕಾರಣ ದಬ್ಬಾಳಿಕೆಗೆ ಒಳಗಾಗುವುದು ತೇಜಸ್ವಿಗೆ ಒಂದು ವ್ಯಂಗ್ಯದಂತೆ ಭಾಸವಾಗುತ್ತದೆ. ಈ ಅರ್ಥಹೀನತೆಗಳು, ಅಸಂಗತತೆಗಳನ್ನು ಚಿಕಿತ್ಸಕವಾಗಿ ನೋಡುವ ಕಿರಗೂರಿನ ಗಯ್ಯಾಳಿಗಳು ಕತೆ ಗಯ್ಯಾಳಿತನವನ್ನು ನೇತ್ಯಾತ್ಮಕವಾಗಿ ನೋಡುವುದನ್ನೂ ಪ್ರಶ್ನಿಸುವಲ್ಲಿ ಆಸಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಆಶಾರ ಅಭಿಪ್ರಾಯದೊಂದಿಗೆ ಇನ್ನಷ್ಟು ಚರ್ಚೆಗೆ ಅವಕಾಶವಿದೆ ಎನಿಸುತ್ತದೆ.

ಕನ್ನಡದ ಮತ್ತು ಇತರ ಭಾರತೀಯ ಭಾಷೆಯ ಹದಿನೈದಕ್ಕೂ ಹೆಚ್ಚು ಲೇಖಕಿಯರ ಕೃತಿಗಳ ಕುರಿತ ಬರಹಗಳೂ ಇಲ್ಲಿವೆ. ಸ್ತ್ರೀವಾದದ ಹಲವು ನೆಲೆಗಳ ಮೂಲಕ ಈ ಲೇಖಕಿಯರ ನಿಲುವುಗಳನ್ನು ಶೋಧಿಸುವುದನ್ನು ಇಲ್ಲಿ ಕಾಣಬಹುದು. ಹೀಗೆ ಮಾಡುವಾಗ ಪ್ರತಿ ಸಂದರ್ಭದಲ್ಲೂ ಅಲ್ಲಿನ ಅಗತ್ಯಕ್ಕೆ ತಕ್ಕಂತೆ ಈ ನೆಲೆಗಳನ್ನು ಬಳಸುವುದು ಇವರ ವೈಶಿಷ್ಟ್ಯ. ಲೇಖಕಿಯರ ಕುರಿತಾಗಲೀ ಲೇಖಕರ ಕುರಿತಾಗಲೀ ಅವರಿಗೊಂದು ನಿರ್ಲಿಪ್ತ ಧೋರಣೆಯಿದೆ. ತ್ರಿವೇಣಿ ಮತ್ತು ಎಂ.ಕೆ.ಇಂದಿರಾ ಕುರಿತಂತೆ ಅವರ ಅಭಿಪ್ರಾಯವನ್ನೇ ನೋಡಬಹುದು: "ತ್ರಿವೇಣಿಯವರಲ್ಲಿ 'ಹೊಸಹೆಣ್ಣಿ'ನ ನಿರೀಕ್ಷೆಗಳಿದ್ದರೆ ಇಂದಿರಾ ಅವರಲ್ಲಿ ನಮ್ಮ ನಡುವೆಯೇ ಇರುವ ಗಟ್ಟಿ ದಿಟ್ಟ ವ್ಯಕ್ತಿತ್ವದ ಹೆಣ್ಣುಗಳ ಹುಡುಕಾಟವಿದೆ.... ಆದರೆ ಇಬ್ಬರಲ್ಲೂ ಸಮಾನವಾದ ನೆಲೆಯೊಂದಿದೆ. ಹೆಣ್ಣಿನ ಬದುಕು ಆಮೂಲಾಗ್ರವಾಗಿ ಬದಲಾಗಬೇಕು ಎಂಬ ತೀವ್ರ ಮಹಾತ್ವಾಕಾಂಕ್ಷೆ ಇಬ್ಬರಲ್ಲೂ ಇಲ್ಲ."(ಪು: 75–76) ಹೀಗೆ ಹತ್ತು ಹಲವು ಆಯಾಮಗಳಲ್ಲಿ, ಸ್ತ್ರೀ ಮನ, ಸ್ತ್ರೀಭಾಷೆ, ಸ್ತ್ರೀದೇಹ, ಸ್ತ್ರೀಪ್ರಜ್ಞೆಗಳನ್ನು ಕೇಂದ್ರವಾಗಿಟ್ಟುಕೊಂಡು ವೈಚಾರಿಕ ಸ್ತ್ರೀವಾದಕ್ಕಿಂತಲೂ ಸಾಂಸ್ಕೃತಿಕ ಸ್ತ್ರೀವಾದದೆಡೆಗೆ ಒಂದು ಗುಲಗುಂಜಿ ತೂಕದಷ್ಟು ಹೆಚ್ಚು ಒಲವನ್ನಿಟ್ಟುಕೊಂಡು ಬರೆಯುವ ಆಶಾರಿಗೆ, 'ಆತ್ಮಘನತೆ' ಎಂಬುದು ಅವರ ಮೆಚ್ಚಿನ ಪದ ಮಾತ್ರವಲ್ಲ 'ಆತ್ಮಘನತೆ'ಯನ್ನು ಕಾಪಿಟ್ಟುಕೊಳ್ಳುವ ಗಳಿಗೆಯೊಂದು ಹೆಣ್ಣಿಗೆ ದಕ್ಕುವುದೇ ಬದುಕಿನ ಪರಮ ಸುಖ ಎಂಬ ಅದಮ್ಯ ನಂಬಿಕೆಯೂ ಇದೆ. ❑

## ನೀಲಾಂಜನೆಯರು

ಇವರೆಲ್ಲಾ ಕಾಮಾಟಿಪುರದ ನೀಲೆಯರು
ಭೂಲೋಕದ ಇಂದ್ರರ ಕೈಚಳಕದ
ಸುಂದರ ಬೊಂಬೆಗಳು ಮಾರಾಟವಾಗಿದ್ದಾರೆ
ಮಾಟ ಮೈಮಾಟದಲ್ಲಿ ಸ್ವರ್ಗಲೋಕದ
ನೀಲಾಂಜನೆಯರನ್ನೂ ಇವರು ಮೀರಿಸಿದ್ದಾರೆ.

ಇಂದ್ರಲೋಕದಲ್ಲಿ ನೀಲಾಂಜನೆಯರಿಗೆ
ಪೈಪೋಟಿಯೋ ಪೈಪೋಟಿ
ಇವಳಿಲ್ಲದಿದ್ದರೆ ಮತ್ತೊಬ್ಬಳನ್ನು
ಧರೆಗಿಳಿಸಿ ತನ್ನ ಕುರ್ಚಿ ಕಾಯ್ದುಕೊಳ್ಳಲು
ಇಂದ್ರನದ್ದು ಸದಾ ಲೆಕ್ಕಾಚಾರ
ಇವರೂ ಹಾಗೇ ಇಲ್ಲಿನ ಇಂದ್ರನ ಲೆಕ್ಕಾಚಾರದಲ್ಲಿ
ದಾರಿಯಲ್ಲಿ ನಿಂತು ಗಿರಾಕಿಗಳನ್ನು
ಕಣ್ಣಂಚಲ್ಲಿ ಕರೆದು ತೂಗಿ ನೋಡುತ್ತಾರೆ.

ಅಂದು ರಾಜಮಹಾರಾಜರ, ಸಂನ್ಯಾಸಿಗಳ
ವ್ರತಭಂಗ ಮಾಡಲು ಇಂದ್ರನ
ಕೈಗೊಂಬೆಯಾಗಿ ವೃಷಭದೇವನ
ಮುಂದೆ ನಿಂತು ನೃತ್ಯಮಾಡಿದ
ಕೀಲುಗೊಂಬೆ ನೀಲಾಂಜನೆಗೆ ಕ್ಷಣಮಾತ್ರದಲ್ಲಿ
ಆಯಸ್ಸು ಮುಗಿದಾಗ ಮತ್ತೊಬ್ಬಳನ್ನು
ಅಲ್ಲಿ ಯಾರಿಗೂ ಗೊತ್ತಾಗದಂತೆ
ಮತ್ತೆ ಮೂರ್ತವಿಟ್ಟ ಇಂದ್ರ
ಅಂತಹ ಇಂದ್ರರು ಇವರಿಗೆ ಇಲ್ಲಿಯೂ
ಇದ್ದಾರೆ.
ಚೆಂದದ ಚೆಂದಕ್ಕಿ ಗೊಂಬೆಗಳಾಗಿದ್ದ
ಇವರನ್ನು ಯಾವುದೋ ಕಾರಣಕ್ಕೆ
ಕಾಮಾಟಿಪುರದ ನೆಲೆ ಸೇರಿಸಿದ್ದಾರೆ
ಕಾಮವನ್ನೇ ಮಾರಿ ಮಾರಿ ಕರಗುವ
ಇವಳ ಜಾಗಕ್ಕೆ ಅವಳೇ ಏನೋ
ಎಂದು ಭ್ರಮಿಸುವಂತೆ
ಮತ್ತೊಬ್ಬ ನೀಲಾಂಜನೆ
ಆ ಜಾಗ ಆವರಿಸುತ್ತಾಳೆ
ನೀಲಾಂಜನೆ ಯಾರಾದರೇನು
ಗಂಡುಕುಲಕ್ಕೆ ಬೇಕಾದ್ದು
ಕಾಮ ಮಾತ್ರವೇ ತಾನೇ?

ವಿಶ್ವಾಮಿತ್ರನ ತಪೋಭಂಗಕ್ಕೆ
ಬಂದ ಮುದ್ದು ಮೇನಕೆ
ಕ್ಷಣಕಾಲ ಮೈ ಮರೆತದ್ದಕ್ಕೆ
ಬಸುರಾಗಿ ಮುದ್ದುಕಂದನ
ಇಲ್ಲಿಯೇ ಬಿಟ್ಟು
ತಾಯಿ ಹೃದಯವ ಕಲ್ಲಾಗಿಸಿ
ಇಂದ್ರನ ಬಳಿ ಹೋಗಿದ್ದಾಳೆ
ಕಾಮಾಟಿಪುರದ ನೀಲೆಯರೂಹಾಗೆ
ಚಿತ್ತಲಾಗಬೇಕು ಆದರೆ
ತಾಯಾಗಬಾರದು ಎಂಬ ಅಲಿಖಿತ ಕರಾರಿದೆ
ಬೆಲೆ ಇರುವ ತನಕ
ದುಡಿದೂ ದುಡಿದೂ ಕೂಡಿಡಬೇಕು
ಮುದಿ ಸೂಳೆಯರಾದಾಗ
ರೋಗಕ್ಕೆ ಮದ್ದಾಗುತ್ತದೆ
ಹಣ ಎಂಬ ಭ್ರಮೆಯಿಂದ

ಕಾಮಾಟಿಪುರದ ಈ ಬದುಕು
ಬೇಡವೆಂದರೂ ಇಲ್ಲಿಗೆ ಎಳೆತಂದು
ನೂಕುತ್ತಾರೆ ಕಾಮಣ್ಣಂದಿರು
ಅಂತಹ ಇಂದ್ರರ ಬದುಕು ಕಟ್ಟಲು
ಇವರುಗಳು ತಾವೇ ದಾಳವಾಗುತ್ತಾರೆ
ದಾಳವಾಗಿ ಲಾಳವಾಗುತ್ತಾರೆ
ಮಣ್ಣಲ್ಲಿ ಕರಗಿದ ಇವರನ್ನು
ಮತ್ತೆ ತಿದ್ದಿತೀಡಿ ಇಂದ್ರರು ಗೊಂಬೆಮಾಡಿ
ಜೀವ ತುಂಬಿ ಮತ್ತೆ ಎದುರುತಂದು
ನಿಲ್ಲಿಸುತ್ತಾರೆ
ಇವರು ನೀಲಾಂಜನೆಯರು

■ ಡಾ. ಎಸ್.ಪಿ. ಪದ್ಮಿನಿ ನಾಗರಾಜು



# ಆಧ್ಯಾತ್ಮಿಕ ಹಾಗೂ ಲೈಂಗಿಕತೆಯ ಮುಖಾಮುಖಿ : ಸಿದ್ಧ ಪರಂಪರೆಯಲ್ಲಿ ದೇಹಮೀಮಾಂಸೆಯ ಕಲ್ಪನೆ

■ಡಾ. ಕೆ.ಬಿ. ಸರಸ್ವತಿ

ವೈಚಾರಿಕತೆಯ ರೆಕ್ಕೆಗಳು ಕಳಚಿ ಉದುರುತ್ತಿರುವ ಕಾಲಘಟ್ಟದಲ್ಲಿ (ಕರ್ನಾಟಕದ ಮಟ್ಟಿಗೆ) ಕೆಲವೊಂದು ಪರಿಕಲ್ಪನೆಗಳನ್ನು ಪುನರ್ವ್ಯಾಖ್ಯಾನಿಸಿಕೊಳ್ಳುವ ಅಗತ್ಯ ಅನಿವಾರ್ಯವಾಗಿ ಒದಗಿದೆ. ಇಂತಹ ಒಂದು ಮುಖ್ಯವಾದ ಪರಿಕಲ್ಪನೆ 'ದೇಹ'ಕ್ಕೆ ಸಂಬಂಧಿಸಿದ್ದು. ಒಂದುಕಡೆ ಮಡೆಸ್ನಾನದಂತಹ ಆಚರಣೆಗಳು, ಜ್ಯೋತಿಷ್ಯ, ಸಂಕಷ್ಟಿ ವ್ರತಗಳು 'ದೇಹ'ಕ್ಕೆ ಆಧ್ಯಾತ್ಮಿಕ ವ್ಯಾಖ್ಯಾನ ನೀಡುತ್ತಿದ್ದರೆ; ವರದಕ್ಷಿಣೆಗಾಗಿ, ಅತ್ಯಾಚಾರಗಳಿಂದ, ಆಸಿಡ್ ದಾಳಿಗೆ ತುತ್ತಾಗಿ ನೆಲಕ್ಕೆ ಒರಗುತ್ತಿರುವ ಮಹಿಳೆಯರ ದೇಹ ಸಾಮಾಜಿಕವಾಗಿ ಶೋಷಿತಳಾದ ಅಬಲೆಯ ವ್ಯಾಖ್ಯಾನವನ್ನು ನೀಡುತ್ತಿದೆ. ದೇಹವನ್ನು ವ್ಯಾಖ್ಯಾನಿಸಿಕೊಳ್ಳುವ ರೀತಿ ಅಥವಾ ದೇಹಮೀಮಾಂಸೆಯು ಪ್ರಭುತ್ವ/ಪುರುಷಾಧಿಕಾರದ ಕೈಯಲ್ಲಿ ಅದಕ್ಕೆ ಬೇಕಾದ ಹಾಗೆ ವಿವರಿಸಲ್ಪಟ್ಟಿದೆ. ಸ್ತ್ರೀವಾದವು ಸ್ತ್ರೀಗೆ ತನ್ನ ದೇಹವನ್ನು ತನ್ನದನ್ನಾಗಿಸಿಕೊಳ್ಳಲು ಮುಕ್ತ ಅವಕಾಶಗಳನ್ನು ಯಾವತ್ತೂ ನೀಡಿದೆ.

ದೇಹವನ್ನು ಕೇವಲ ಭೌತಿಕ ದೇಹವನ್ನಾಗಿ ಗ್ರಹಿಸಿದ ವೈದಿಕ ಮನಸ್ಸುಗಳಿಗೆ ವ್ಯತಿರಿಕ್ತವಾಗಿ ಸೂಫೀ/ಸಿದ್ಧನಾಥರಂತಹ ಅವೈದಿಕ ಪರಂಪರೆಗಳು ದೇಹವನ್ನು ಸಮುದಾಯದ ಪ್ರಜ್ಞೆಯೊಂದಿಗೆ ಅಖಂಡವಾಗಿ ಗ್ರಹಿಸುವ ನಿಲುವು ಭಾರತೀಯ ಸ್ತ್ರೀವಾದಕ್ಕೆ ತುಂಬಾ ಆತ್ಮೀಯವಾಗಿ ಕಾಣುತ್ತದೆ. ದೇಹವನ್ನೂ ಸಮಷ್ಟಿಯನ್ನೂ ವಿಭಜಿಸದೆ ಏಕವಾಗಿ ತಿಳಿಯುವ ಅವರ ಅರಿವು ಜಾಗತೀಕರಣಕ್ಕೆ ತೀವ್ರವಾದ ಸವಾಲನ್ನು ಒಡ್ಡುತ್ತದೆ. ಲೈಂಗಿಕತೆಯನ್ನು ಅದರ ಭ್ರಷ್ಟಗೊಂಡಿರುವ ರೂಪದಿಂದಲೇ ವಿವರಿಸಿಕೊಂಡಿರುವ ನಮಗೆ ಸಹಜ ಸಿದ್ಧರ ಲೈಂಗಿಕತೆಯ ತಿಳಿವಳಿಕೆ ಅನೇಕ ಪ್ರಶ್ನೆಗಳನ್ನು ಮುಂದಿಡುತ್ತವೆ. ಭಾರತೀಯ ಅವೈದಿಕ ಪರಂಪರೆಯ ಬುತ್ತಿಯಲ್ಲಿ ಕಂಡುಬರುವ ಈ ತಿಳಿವುಗಳು ಅಧ್ಯಾತ್ಮ, ಸ್ತ್ರೀ ಹಾಗೂ ದೇಹವನ್ನು ಸರಿಯಾಗಿ ವಿವರಿಸಿಕೊಟ್ಟಿವೆ.

ದೇಹವೆಂಬುದು ನಶ್ವರ. ಆದರೆ ನಾವು ಅನುಭವಿಸುವ, ಭಾವಿಸುವ, ಪ್ರೀತಿಸುವ, ಭೋಗಿಸುವ, ಕೋಪಿಸಿಕೊಳ್ಳುವ, ಶರಣಾಗುವ, ಗೌರವಿಸುವ, ಅವಮಾನಿಸುವ ಪ್ರತಿಯೊಂದು ಸಂಗತಿಯೂ ದೇಹದ ಅಭಿವ್ಯಕ್ತಿಯೇ. ದೇಹವು ವೈಯಕ್ತಿಕ ಸ್ವಾತಂತ್ರ್ಯದ ಧ್ಯೇಯವನ್ನು ಅಭಿಮಾನಿಸುವಂತಹದ್ದು. ದೇಹವು ಕ್ರಿಯಾತ್ಮಕವಾದಾಗ, ವ್ಯವಹಾರಮುಖಿಯಾದಾಗ ಅದರ ಮೇಲೆ ಅರಿವಿದ್ದೊ/ಅರಿವಿಲ್ಲದೆಯೊ ಆರೋಪವಾಗುವಂತಹ ಅನೇಕ ತರಹದ ಅನುಸಂಧಾನಗಳೊಂದಿಗೆ ಅದು ತೊಡಗಿಸಿಕೊಳ್ಳುವ ರೀತಿಯು ವೈವಿಧ್ಯಮಯವೂ ಸೃಜನಶೀಲವೂ ಆಗಿರುತ್ತದೆ. ಸಾಮಾಜಿಕ ಬದುಕು, ಆರ್ಥಿಕ ಅನುಕೂಲ, ಮಾನಸಿಕ ಸ್ಥೈರ್ಯ, ಪಾರಂಪರಿಕ ನೆನಪಿನ ಸ್ಮೃತಿ, ಆವರಣವು ಕಟ್ಟಿಕೊಡುವ ಭಾವ ಇವೆಲ್ಲವೂ ದೇಹದ ಅಸ್ತಿತ್ವವನ್ನು ರೂಪಿಸುತ್ತಿರುತ್ತವೆ. ದೇಹವು ನಿರ್ಭೀತಿಯ ಮನಸ್ಥಿತಿಯಲ್ಲಿ ಕ್ರಿಯಾತ್ಮಕವಾಗಬೇಕೆಂದರೆ ಭ್ರಷ್ಟವಾಗದ ಸ್ಥಿತಿಯಲ್ಲಿ ಉಳಿಯಬೇಕಾಗುತ್ತದೆ. ಭಯವು ದೇಹವನ್ನು ಭ್ರಷ್ಟಗೊಳಿಸುತ್ತದೆ. ಅಹಂಕಾರವಿಲ್ಲದಸ್ಥಿತಿಯಲ್ಲಿ ಭಯವು ನಿರಸನಗೊಳ್ಳುತ್ತದೆ.

ದೇಹವು ತನ್ನ ಸಹಜ ಘನತೆಯನ್ನು ಉಳಿಸಿಕೊಂಡು ಅರ್ಥವಂತವಾಗಿ ಚಲನಶೀಲವಾಗಲು ಭೂಮಿಕೆಯನ್ನು ಅನುವು ಮಾಡಲು ಪ್ರಯತ್ನಿಸಿದ್ದು ಸಿದ್ಧ ಪರಂಪರೆ. ಪ್ರತಿಯೊಂದು ಚೇತನವೂ ಈ ಘನತೆಯನ್ನು ಉಳಿಸಿಕೊಳ್ಳಲು ಹವಣಿಸುತ್ತಿರುತ್ತದೆ. ಸಾಧ್ಯವಿದ್ದಷ್ಟೂ ಭ್ರಷ್ಟವಾಗದಂತೆ ಪ್ರಪಂಚದೊಡನೆ ವ್ಯವಹರಿಸುವುದು ಹೇಗೆಂಬುದಕ್ಕೆ ಅವರ ಬಳಿ ಉತ್ತರಗಳನ್ನು ಹುಡುಕಬಹುದಾಗಿದೆ. ಇದೇ ನಿಜ ಮುಕ್ತಿಯೂ, ಸಾಧನಾ ತಪಸ್ಸೂ ಹೌದು. ಇಂತಹ ಅವಸ್ಥೆಯು ತ್ಯಾಗವನ್ನು ನಿರೀಕ್ಷಿಸುತ್ತದೆ. ದೇಹಾಭಿಮಾನವನ್ನು (ಚಲನರಹಿತವಾಗುವುದು, ಸ್ಥಾವರವಾಗುವುದು), ಲೋಭವನ್ನು ನಿರಾಕರಿಸುತ್ತದೆ. ಯಾವುದೇ ವರ್ಣ, ಪಂಥಕ್ಕಾಗಲಿ ನಿಷ್ಠೆಯನ್ನು, ಅಭಿಮಾನವನ್ನು

ಕೆ.ಬಿ. ಸರಸ್ವತಿ ನಮ್ಮ ನಡುವೆ ಇರುವ ವಿರಳ ಚಿಂತಕರು. ಹೊಸ ಹೊಳಹು, ವಿಚಾರಗಳನ್ನು ಕೊಡಬಲ್ಲರು. 'ನಮ್ಮ ಮಾನಸ'ದ ಒಳ ಓದಿನಲ್ಲಿ ಹಲವು ಪ್ರಶ್ನೆಗಳು ಎದ್ದಿವೆ. ಅವಕ್ಕೆಲ್ಲ ವೇದಿಕೆಯಾಗಲು ಇದು ಕೊನೆಯ ಸಂಚಿಕೆಯಾದ್ದರಿಂದ ಸಾಧ್ಯವಾಗುತ್ತಿಲ್ಲ. ಹಾಗಾಗಿ ಇವು ಮಾನಸದ ಅಭಿಪ್ರಾಯಗಳಾಗುವುದಿಲ್ಲ. ಆದರೆ ಯೋಚನೆಗೆ ಹಚ್ಚುವ ಇಂಥದೊಂದು ಲೇಖನದ ಮಹತ್ವದ ಅರಿವೂ ನಮಗಿದೆ. ಬೇರೆ ಬೇರೆ ಹಂತದಲ್ಲಿ ಚರ್ಚೆಯಾಗಲಿ ಎಂಬುದು ನಮ್ಮ ಆಶಯ. –ಸಂ.

ವರ್ಜಿಸುತ್ತದೆ. ನಿರಂತರವಾಗಿ ಕಾಯ್ದುಕೊಂಡ ಈ ಅಂತಃಶಕ್ತಿಯು ಸಿದ್ಧಪರಂಪರೆಯಲ್ಲಿ ಗುಪ್ತಗಾಮಿನಿಯಂತೆ ಸದಾ ಪ್ರವಹಿಸುತ್ತಿರುತ್ತದೆ. ಅದರ ಆತಂಕವಿರುವುದು ಕರ್ತೃತ್ವ ಶಕ್ತಿಯ ಈ ಬೀಜ ಸ್ವರೂಪವು ಎಲ್ಲಿ ಪ್ರಾಪಂಚಿಕ ವಸ್ತು ವ್ಯವಹಾರದೊಳಗೆ ಸೀಮಿತಗೊಳ್ಳುವುದೋ ಎಂದು.

ಭೀತಿಯ ಸೋಂಕು ನಾನಾ ರೂಪದಲ್ಲಿ ಆವರಿಸುತ್ತದೆ. ಸೋಲಿನ ಭಯ, ಸಾವಿನ ಭಯ, ವ್ಯವಸ್ಥೆಯ ಭಯ, ಜಾತಿಯ ಭಯ, ಧರ್ಮದ ಭಯ, ಬಡತನದ ಭಯ, ಅಂಚಿಗೆ ತಳ್ಳಲ್ಪಡುವ ಭಯ, ಮುಗ್ಧತೆಯನ್ನು ಕಳೆದುಕೊಳ್ಳುವ ಭಯ ಇವೆಲ್ಲವೂ ಅಸಹಜವಾದವು. ಭೀತಿಯು ನಾಗರೀಕ ಮಾನವರ ಸಹಜಸ್ಥಿತಿ ಅಲ್ಲವೇ ಅಲ್ಲ. ಸಹಜವಾಗಿರುವುದೇ ಸಿದ್ಧರ ಲಕ್ಷಣವು. ಸ್ವಯಂವಿವೇಚನೆ, ಅಖಂಡತೆಯ ಕಲ್ಪನೆ, ಅದನ್ನು ಸಾಧಿಸುವ ಛಲ, ಅದರೆಡೆಗೆ ಹಾದಿ ಹುಡುಕಿಕೊಳ್ಳುವ ಬುದ್ಧಿವಂತಿಕೆ, ಆ ಹಾದಿಯಲ್ಲಿ ನಡೆಯುವ ಸಂಕಲ್ಪ ಮತ್ತು



ಜವಾಬ್ದಾರಿ ಅವರ ಬದ್ಧತೆ, ಕನಸೂ ಹೌದು. ದೇಹ ಮತ್ತು ಅದರ ಸೆಳೆತ ಆಧ್ಯಾತ್ಮದ ಭಾಗವೇ ಹೊರತು ಅಧಿಕಾರ/ಮುಕ್ತಿಗೆ ವಾಹಕವಲ್ಲ. ಹೆಣ್ಣಿಗೆ, ಹಾಗೆಯೇ ಭಾಷೆ, ಅಕ್ಷರ ಅಸ್ತಿತ್ವ ಕಳೆದುಕೊಂಡ ಎಲ್ಲರಿಗೂ ಅಸ್ತಿತ್ವ ಒದಗಿಸಿಕೊಡುವುದು ದೇಹವೇ. ದಾಖಲಾಗಬೇಕಾದ ಅವಶ್ಯಕತೆಯಾಗಲಿ/ಅನಿವಾರ್ಯವಾಗಲಿ ಇಲ್ಲದವರಿಗೆ ಮೌನವು ಭಾಷೆಯಾಗುವುದು ದೇಹದ ಮೂಲಕವೇ. ಧಾರ್ಮಿಕ ಲಾಂಛನಗಳನ್ನು ಹೊತ್ತುಕೊಂಡು, ಮತಾಂಧತೆಯನ್ನು ಮೆರೆಸುವ ಮತಗಳಿಗೆ ಅದರಿಚ್ಛೆಯಂತೆ ಸ್ತ್ರೀಯ ದೇಹದ ಮೇಲೆ ಬರೆಯಲು ಅನುವು ಮಾಡಿಕೊಡುತ್ತಿರುವ ವಿಸ್ಮೃತಿಯೆದುರು, ಅಂತಹ ವಿಸ್ಮೃತಿಯನ್ನು ಒಪ್ಪಿ ಆವಾಹಿಸಿಕೊಳ್ಳುತ್ತಿರುವ ಮಹಿಳಾ ಸಂಕುಲಕ್ಕೆ ವ್ಯತಿರಿಕ್ತವಾಗಿ ಸಿದ್ಧಪ್ರಜ್ಞೆಯು ಬೇರೆಯದೇ ಸ್ತರದಲ್ಲಿ ವ್ಯವಹರಿಸುತ್ತದೆ. ದೇಹದ ಮೋಹವು ಇಂದ್ರಿಯ ಸುಖವನ್ನು ಅನುಭವಿಸುವುದಕ್ಕಷ್ಟೇ ಸೀಮಿತವಾಗುವುದನ್ನು ಕಠೋರವಾಗಿ ಅಮಾನ್ಯಮಾಡುವ ಸಿದ್ಧ ವಿವೇಚನೆಯು ವಂಚನೆಯಿಲ್ಲದ ಸ್ವತಂತ್ರ ಪ್ರವೃತ್ತಿ. ವ್ಯವಸ್ಥೆಯ ಕುತಂತ್ರಗಳಾದ ಲಿಂಗಭೇದ, ಪಾವಿತ್ರ್ಯದ ಸಂಕೋಲೆಗಳು, ದೇಹವನ್ನು ಕಲ್ಪಿತ ಆತ್ಮನಿಗೆ ಅರ್ಪಿತಮಾಡುವ ಧಾರ್ಮಿಕ ಸಂಕಥನಗಳು ಎಲ್ಲವೂ ಸಿದ್ಧನಿಗೆ ವಂಚನೆಯ ಹುನ್ನಾರಗಳೇ.

ಸಿದ್ಧನೆಂದರೆ ನನ್ನ ಗ್ರಹಿಕೆಯಲ್ಲಿ ನಿರ್ಲಿಪ್ತ ತಾಪಸಿಕನಲ್ಲ. ದೇಹವು ಬದುಕುವ ವ್ಯವಹಾರದಲ್ಲಿ ಸತ್ತು ಬದುಕದಂತೆ ಕಾಯ್ದುಕೊಳ್ಳುವ/ಕಾಯ್ದುಕೊಳ್ಳಲು ಬೇಕಾದ ಎಚ್ಚರವನ್ನು ಧ್ಯಾನಿಸುವ ಸೂಕ್ಷ್ಮಗ್ರಾಹಿ. ಅಖಂಡತೆಯ ಅನ್ವೇಷಣೆಯು ಸಿದ್ಧರಿಗೆ ಮೂಲವಾದದ್ದು. ವ್ಯಕ್ತಿಯ ಬದುಕಾಗಲೀ, ಸಮುದಾಯದ ಅವಶ್ಯಕತೆಗಳಾಗಲೀ ಒಂದಕ್ಕೊಂದು ಪೂರಕವಾಗಿ ಎಲ್ಲರ ಒಳಿತಿಗಾಗಿ ಶ್ರಮಿಸಬೇಕು. ಇವೆರಡೂ ಅಖಂಡವಾಗಿ ಒಂದೇ ಎಂಬುದು ಸಿದ್ಧಪ್ರಜ್ಞೆಯ ಅಭಿಮತ. ಆದ್ದರಿಂದಲೇ ಕಾರಣವನ್ನಾಗಲಿ, ಪ್ರಮಾಣವನ್ನಾಗಲಿ, ಆದಿಯನ್ನಾಗಲಿ, ಅಂತ್ಯವನ್ನಾಗಲಿ ಇವರು ನಿರಾಕರಿಸುತ್ತಾರೆ.

ಸಿದ್ಧಪರಂಪರೆಯೆಂಬುದೊಂದು ಬಿಂದು, ಅದೊಂದು ಬೀಜ. ಅದರ ಅನ್ವಯವಿರುವುದು ಕರ್ಮದಲ್ಲಿ. ಅದು ಮೊಳಕೆಯೊಡೆಯುವುದು ಕರ್ಮದ ಹೊಳೆ ಹರಿದಾಗಲೇ. ನಿರಂತರ ಚಲನೆಯೇ ಇದರ ಲಕ್ಷಣ. ಸಿದ್ಧಪರಂಪರೆಯು ದೇಹವಿಲ್ಲದೆ ಇಲ್ಲ. ಆದರೆ ದೇಹಾಭಿಮಾನವು (ಪ್ರಮಾಣಕ್ಕೆ ಅಂಟಿಕೊಳ್ಳುವುದು) ಪಾಪ. ಇದರಿಂದ ಕರ್ಮವು ಭ್ರಷ್ಟವಾಗುತ್ತದೆ. ಮಾತು ಕ್ರಿಯೆಯಲ್ಲಿ ಪರ್ಯವಸಾನಗೊಂಡಾಗ ಮಾತ್ರವೇ ಅದಕ್ಕೆ ಸಾರ್ಥಕ್ಯ. ಮಾತು ಬೀಜವಾಗಬೇಕು. ಬೀಜ ಮೊಳಕೆಯೊಡೆದು ಸಾರ್ಥಕವಾಗಬೇಕು. ಇದೊಂದು ನೈಸರ್ಗಿಕ ಜೈವಿಕ ಸರಪಳಿ. ಬದ್ಧತೆಯೇ ಇದರ ಕ್ರಮ, ಅದೇ ಬೆಳವಣಿಗೆಗೆ ಪೂರಕವಾದದ್ದು. ಇಲ್ಲಿ ಜವಾಬ್ದಾರರು ಆಯಾ ವ್ಯಕ್ತಿಗಳೇ. ಪ್ರಜ್ಞೆಯನ್ನು ಹೊತ್ತಿರುವುದೇ ಈ ದೇಹ. ಪರಿಸ್ಥಿತಿಯನ್ನು ಜವಾಬ್ದಾರಿಯುತವಾಗಿ ಅರ್ಥಮಾಡಿಕೊಂಡು ನಿಭಾಯಿಸುವುದೇ ಕರ್ಮದ ಹಾದಿ.

ಆಧ್ಯಾತ್ಮಿಕ ಜಾಗೃತಿಗೆ ಭೂತವಾಗಲೀ, ಭವಿಷ್ಯವಾಗಲೀ ಮುಖ್ಯವಾಗುವುದಕ್ಕಿಂತ ವಾಸ್ತವಪ್ರಜ್ಞೆಯೇ ಮುಖ್ಯವಾದದ್ದು. ಬದುಕಿನಲ್ಲಿ ಅನ್ವಯಗೊಂಡು ಕ್ಷಣ-ಕ್ಷಣ ಆಚರಣೆಯಲ್ಲಿ ಮುಕ್ತವಾಗುವ ಈ ಪ್ರಜ್ಞೆಯು ತೆರೆದುಕೊಳ್ಳುವುದು ಜೀವ ಜಾಲದ ಅಖಂಡತೆಯನ್ನು ಪೋಷಿಸುವ ಜೀವನಾಡಿಯನ್ನು ಗ್ರಹಿಸುವುದರಲ್ಲಿ. ಈ ಪರಿಸ್ಥಿತಿಗೆ ಯಾವ ಸ್ಥಿತಿಗಳೂ ಸ್ಥಿರವಲ್ಲ. ಹೆಣ್ಣು-ಗಂಡು, ಹಗಲು-ರಾತ್ರಿ, ಕಾಲ-ದೇಶ, ಭಾಷೆ-ಆಚರಣೆ, ಮಾತು-ಮೌನ, ಸುಖ-ಅಸುಖ, ಶಬ್ದ-ನಿಶ್ಶಬ್ದ ಯಾವುದೂ ಅಲ್ಲ. ಆದರೆ ಸಂಸಾರದಲ್ಲಿ ಬದುಕುವಾಗ ನಮಗೆ ಬೇಕಾದ, ಅನುಕೂಲವಾದ ಸ್ಥಿತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ನಮ್ಮದು. ಭೌಗೋಳಿಕ ಅನುಕೂಲತೆ, ಸಾಂಪ್ರದಾಯಿಕ ರೂಢಿಗಳು, ಅಭ್ಯಾಸ ಬಲಗಳು ಪರಿಸ್ಥಿತಿಗೆ ಅಂಟಿಕೊಳ್ಳುವಂತೆ ಮಾಡುತ್ತವೆ. ಬಹುತೇಕ ಸಂದರ್ಭಗಳಲ್ಲಿ ಪರಿಸ್ಥಿತಿಯನ್ನು ನಿರ್ಧರಿಸುವವರು ನಾವಾಗಿರುವುದಿಲ್ಲ. ಸರ್ಕಾರಗಳು, ಸಂಬಂಧಗಳಲ್ಲಿನ ಮೋಹ, ಸಮಾಜದ ಸೈದ್ಧಾಂತಿಕ-ಧಾರ್ಮಿಕ ತತ್ತ್ವಗಳು, ಅಧಿಕಾರ ಕೇಂದ್ರಗಳು ಜೀವಪೋಷಣಾ ವ್ಯವಸ್ಥೆಯನ್ನು ಅಖಂಡವಾಗಿ ಗ್ರಹಿಸಲು ತೊಡಕುಗಳನ್ನು ಒಡ್ಡುತ್ತವೆ. ಇಂತಹ ವ್ಯವಸ್ಥೆಗಳನ್ನು ಸಾಧನೆಗೆ ಅಡ್ಡಿಯಾಗುವುದರಿಂದ ಸಿದ್ಧರು ದೂರವಿಡುತ್ತಾರೆ. ಪ್ರತಿಯೊಂದು ಅಂಶವನ್ನೂ ಸಹ ವ್ಯಾಖ್ಯಾನಿಸುವ ಅಧಿಕಾರ ಕೇಂದ್ರಗಳು ತಮಗೆ ಬೇಕಾದ ಹಾಗೆ ಮೇಲೆ ಹೇಳಿದ ಸ್ಥಿತಿಗಳನ್ನು ಪಲ್ಲಟಗೊಳಿಸಿ ಲಾಭ-ನಷ್ಟ ವ್ಯಾಪಾರಕ್ಕೆ ಅಳವಡಿಸಿ ಬಿಡುತ್ತವೆ. ಅನಿವಾರ್ಯವಾಗಿ ಅಸಹಜತೆಯನ್ನು ಸಹಜವೆಂಬಂತೆ ರೂಢಿಗೆ ತಂದು

ಬಿಡುತ್ತವೆ. ಅಧಿಕಾರಕೇಂದ್ರಗಳು/ಪುರುಷಾಧಿಕಾರ ಕೇಂದ್ರಗಳು ಸೃಷ್ಟಿಸುವ ಲೈಂಗಿಕತೆಯ ಪರಿಕಲ್ಪನೆಗಳು ಸ್ತ್ರೀ-ಪುರುಷ ಮಿಲನ ಮಾತ್ರವನ್ನೇ ವೈಭವೀಕೃತಗೊಳಿಸಿ ಬದುಕನ್ನು ಅಖಂಡವಾಗಿ ಗ್ರಹಿಸದೆ ಇರುವಂತೆ ನಮ್ಮನ್ನು ರೂಪಿಸುತ್ತವೆ. ಆಧ್ಯಾತ್ಮದ ಉತ್ಕಟತೆಯಲ್ಲಿ ಅದ್ದಿದಂತಿರುವ ಅಕ್ಕನ ಈ ವಚನಗಳನ್ನು ಗಮನಿಸಿ:

**ಒಂದಲ್ಲ, ಎರಡಲ್ಲ, ಮೂರಲ್ಲ, ನಾಲ್ಕಲ್ಲ**
**ಎಂಬತ್ನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ**
**ಭಾರದ ಭವಗಳಲ್ಲಿ ಉಂಡೆ ಉಂಡೆ ಸುಖ-ಅಸುಖಂಗಳ**
**ಹಿಂದಣ ಜನ್ಮ ತಾನೇನಾದಡೆಯೂ ಆಗಲಿ**
**ಮುಂದೆ ನೀ ಕರುಣಿಸಾ ಚೆನ್ನಮಲ್ಲಿಕಾರ್ಜುನ ॥**
**ಬತ್ತಿಹ ಮೊಲೆಯ ಭರದ ಯೌವನದ**
**ಚಲುವ ಕಂಡು ಬಂದಿರಣ್ಣ**
**ಅಣ್ಣ ನಾನು ಹೆಂಗೂಸಲ್ಲ**
**ಅಣ್ಣ ನಾನು ಸೂಳೆಯಲ್ಲ**
**ಅಣ್ಣ ಮತ್ತೆ ಕಂಡು ಕಂಡು ಆರೆಂದು ಬಂದಿರಣ್ಣ**
**ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪರಪುರುಷನು ನಮಗಾಗದ ಮೋರೆ ನೋಡಿರಣ್ಣ ॥**

ಅಕ್ಕ ತನ್ನನ್ನು ತಾನು ಹೆಣ್ಣಲ್ಲವೆಂದು ಹೇಳಿಕೊಂಡಿರುವುದರ ಹಿಂದೆ ಮತ್ತು ಅನೇಕ ಯೋನಿಗಳಿಂದ ಬಂದವಳೆಂದು ಹೇಳುತ್ತಿರುವ ಮಾತುಗಳು ಸುಳಿವು ನೀಡುವುದು ಬದುಕಿನ ಲಕ್ಷಾಂತರ ಸಂಭ್ರಮಗಳನ್ನು ಕುರಿತೇ ಹೊರತು ಪಾಶ್ಚಾತ್ಯ ಸ್ತ್ರೀವಾದಗಳು ವಿವರಿಸುವ ಹಾಗೆ ವ್ಯಾವಹಾರಿಕ ಲೈಂಗಿಕತೆಯ ಮುಕ್ತ ಅಭಿವ್ಯಕ್ತಿಯೂ ಅಲ್ಲ, ಸಾಂಪ್ರದಾಯಿಕ ವಾದಿಗಳು ವ್ಯಾಖ್ಯಾನಿಸುವ ಹಾಗೆ ಪುನರ್‌ಜನ್ಮವೂ ಅಲ್ಲ, ಭ್ರಷ್ಟಗೊಂಡ ಲೈಂಗಿಕತೆಯು ವಿವರಿಸುವ ಹಾಗೆ ಮಿಲನಸಂಭ್ರಮವನ್ನು ವೈಭವೀಕರಿಸುವುದೂ ಅಲ್ಲ. ಜೀವಜಾಲದ ಸಂಭ್ರಮವೇ, ಅದರ ಜೈವಿಕ ಬದುಕೇ ಆಧ್ಯಾತ್ಮವೂ. ಆ ಸಂಭ್ರಮವನ್ನು ಸವಿಯಲು ಲಕ್ಷಾಂತರ ಯೋನಿಗಳಾದರೂ ಸಾಲದು. ಹಿಂದಿನ ಬದುಕು ಅಮುಖ್ಯವಾದದ್ದು. ಬದುಕಿನ ಕ್ಷಣ-ಕ್ಷಣವೂ ಮಿಲನ ಕ್ರಿಯೆಯಷ್ಟೇ ಸಂಭ್ರಮಿಸುವಂತಹದ್ದು.

ಸಿದ್ಧಪ್ರಜ್ಞೆಯಲ್ಲಿ ದೇಹವೆಂಬುದು ರಕ್ತ-ಮಾಂಸ-ಮಜ್ಜೆಯ ಸಂಗ್ರಹವಷ್ಟೇ ಅಲ್ಲ, ಅನುಭಾವದ ಎತ್ತರಕ್ಕೆ ಒಯ್ಯಬಲ್ಲ ನೌಕೆ. ಇಡೀ ಸಮುದಾಯದ ವೈವಿಧ್ಯಮಯ ಐಕ್ಯವನ್ನೇ ದೇಹವೆಂದು ಪರಿಭಾವಿಸಬಲ್ಲ ಸ್ತರದಲ್ಲಿ ಸಿದ್ಧಪ್ರಜ್ಞೆ ವ್ಯವಹರಿಸುತ್ತದೆ. ಅವರ ದೇಹ ಮೀಮಾಂಸೆಯು ಸಮಾಜದ ಯಾವುದೇ ವಿಕಾರವನ್ನು, ನ್ಯೂನತೆಯನ್ನು ತನ್ನದೆಂದು ಭಾವಿಸುತ್ತದೆ. ತಿದ್ದಲು ಹವಣಿಸುತ್ತದೆ.

ಸ್ತ್ರೀ ಎಂಬುದು ಒಂದು ಸ್ಥಿತಿ. ಅದೊಂದು ಮಾಯೆ ಯಾಗಲಿ, ಭೋಗವಸ್ತುವಾಗಲಿ ಅಲ್ಲ. ಬಿಡುಗಡೆ ಬೇಕಿರುವುದು ಮೋಹದಿಂದ. ಭಯ, ದ್ವೇಷವಿರುವುದು ಎಚ್ಚರದ ಸ್ಥಿತಿಯಿಂದ ವಿಸ್ಮೃತಿಯೆಡೆಗೆ ಕೊಂಡ್ಯೊಯುವ ಮನೋವಿಕಾರಗಳಿಂದ. ಭ್ರಷ್ಟತೆಗಳಿಂದ ಫಲವಂತಿಕೆ ಇರುವುದು ಕತೃತ್ವಶಕ್ತಿ ಇರುವ ಸಮುದಾಯದ ಪ್ರಜ್ಞೆಯಲ್ಲಿಯೇ. ಈ ಪ್ರಜ್ಞೆಯೇ ನಿಜ ಸ್ತ್ರೀ. ಶಕ್ತಿ ಸ್ವರೂಪಿಣಿ.

ಈ ಜೆಂಡರ್-ನ್ಯೂಟ್ರಲ್ ಆದ, ಜಾತ್ಯತೀತವಾದ, ಸೃಜನಶೀಲ ವಾದ, ಸಮುದಾಯವನ್ನಲದೆ ಯಾರನ್ನೂ ಮಾನ್ಯಮಾಡದ ನಿಷ್ಠುರತೆಯೇ ಭಾರತದ ಪ್ರಜಾಪ್ರಭುತ್ವಕ್ಕೆ ತಳಹದಿ; ಅಂತೆಯೇ ಭಾರತೀಯ ಸ್ತ್ರೀಯನ್ನೂ ಅತಿಯಾಗಿ ವೈಭವೀಕರಿಸುವುದಾಗಲೀ, ಶೋಷಿಸುವುದಾಗಲೀ ಮಾಡದೆ ಸಹಜವಾಗಿ ಪೋಷಿಸುವಂತಹದ್ದು ಕೂಡ. ❑

# ಕೇಳಿರಿ ಜನರೆ

ಕೇಳಿರಿ ಜನರೆ, ಅಕ್ಕ ತಂಗಿಯರೆ
ಕೇಳಿರಿ ಹೇಳುವೆ ಮಾತೊಂದು
ಭಾರತವೆಂಬೋ ದೇಶವಿತ್ತೊಂದು
ಸುವರ್ಣಭೂಮಿಯು ಎನಿಸಿತ್ತು
ಸುವರ್ಣಭೂಮಿಯ ಒಳಗಡೆಯಲ್ಲಿ
ಕರ್ನಾಟಕವೆಂಬೋ ನಾಡಿತ್ತು ॥ ಕೇಳಿರಿ ಜನರೆ ॥

ಕರ್ನಾಟಕವೆಂಬೊ ರಾಜ್ಯದಲ್ಲಿ
ಹಳ್ಳಿಹಳ್ಳಿಗಳು ನೂರಿತ್ತು
ಹಳ್ಳಿ ಹಳ್ಳಿಯ ಮೂಲೆ ಮೂಲೆಯಲಿ
ನಲಿಯುವ ಹೆಂಗಳ ಗುಂಪಿತ್ತು ॥ ಕೇಳಿರಿ ಜನರೆ ॥

ಆ ಹೆಂಗಳು ಸಾಲೆಗೆ ಹೋಗಿಲ್ಲ
ಅಕ್ಷರ ವಿದ್ಯೆಯ ಕಲಿತಿಲ್ಲ
ಬಾಳಲಿ ಬೆಳಕನು ಕಾಣೋದಿಲ್ಲ
ಸಮಾಜಕಾರ್ಯದಿ ತೊಡಗೋದಿಲ್ಲ ॥ ಕೇಳಿರಿ ಜನರೆ ॥

ದಿನವಿಡಿ ದುಡಿಸಿ ದೇಹವ ದಂಡಿಸಿ
ಎಂತಹ ಬಾಳನು ನೀಡುವಿರಿ
ದುಡಿಸೀ ದುಡಿಸೀ ಕನಸನು ಕೊಲ್ಲುತ
ಕತ್ತಲ ಕೂಪದಿ ತಳ್ಳುವಿರಿ ॥ ಕೇಳಿರಿ ಜನರೆ ॥

ಮಕ್ಕಳ ಕಳಿಸಿರಿ ಶಾಲೆಗೆ ಇಂದೇ
ನಂತರ ನೋಡಿರಿ ನೌಬತ್ತು
ಕನಸೂ ಬೆಳೆಯಲಿ ಮನಸೂ ಬೆಳೆಯಲಿ
ಬೆಳೆಯಲಿ ಅವರ ಮನೋಬಲ ॥ ಕೇಳಿರಿ ಜನರೆ ॥

ಚಿಕ್ಕ ವಯಸಿನಲಿ ಮದುವೆಯ ಮಾಡಿ
ಕೊರಳಿಗೆ ಉರುಳನು ಹಾಕುವಿರಿ
ಆಡಿ ಹಾಡುವ ಜೀವವು ಹಾಗೆ
ನಲುಗಿ ಹೋಗುವುದು ಬೆಂಕಿಯಲಿ ॥ ಕೇಳಿರಿ ಜನರೆ ॥

ಬೆಳೆಸಬೇಡಿರಿ ಮೂಢನಂಬಿಕೆಯ
ಅಜ್ಞಾನ ಅಂಧಕಾರ ಕೊಳಕನ್ನು
ವಿದ್ಯೆಯ ಮೂಲಕ ವಿಜ್ಞಾನ ಬೆಳೆಸಿ
ಬೆಳಗಿರಿ ಬಾಳಿನ ಬೆಳಕನ್ನು ॥ ಕೇಳಿರಿ ಜನರೆ ॥

ಒಂದು ಹೆಣ್ಣದು ತಾನು ಕಲಿತರೆ
ಇಡೀ ಕುಟುಂಬವೇ ಬೆಳಗುವುದು
ಕಷ್ಟನಷ್ಟದ ಈ ಜೀವನದಿ
ನಕ್ಷತ್ರ ಬೆಳಕದು ಮೂಡುವುದು ॥ ಕೇಳಿರಿ ಜನರೆ ॥

ನಿಮ್ಮ ಮಕ್ಕಳಿಗೆ ನೀವೇ ಬೆಳಕು
ಕೊಡಿಸಿರಿ ಅವರಿಗೆ ವಿದ್ಯೆಯನು
ಸಹನೆ ಶಾಂತಿ ಪ್ರೀತಿಯು ಮೂಡಿ
ಕಳೆವುದು ಕಷ್ಟದ ಭ್ರಾಂತಿಯನು ॥ ಕೇಳಿರಿ ಜನರೆ ॥

ಕತೆಯನು ಕೇಳಿ ಬದಲಾಗಿ ನೀವು
ಕಳುಹಿಸಿ ಮಕ್ಕಳ ಕಲಿಯುವುದಕೆ
ಅಕ್ಷರ-ಗುರಿಯು ಕಲಿವುದೇ ಬಾಳಿನ
ದೇಶದ ಬೆಳೆಯುವ ಬಾಲಕಿಗೆ ॥ ಕೇಳಿರಿ ಜನರೆ ॥

■ ಎಸ್. ಮಾಲತಿ

# ಪ್ರಗತಿ ಸಾಧನೆಯಲ್ಲಿ ದೇಶದಲ್ಲೇ ಕರ್ನಾಟಕಕ್ಕೆ ಹಲವು ಪ್ರಥಮಗಳ ಗರಿ

ಜನಪರ ಕಾಳಜಿಯ ಕರ್ನಾಟಕ ಸರ್ಕಾರವು ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗಾಗಿ ರೂಪಿಸಿದ ಯೋಜನೆಗಳ ಯಶಸ್ವೀ ಅನುಷ್ಠಾನದಿಂದಾಗಿ ರಾಜ್ಯವು ಇಂದು ದೇಶದಲ್ಲೇ ಪ್ರಗತಿಯ ಮುಂಚೂಣಿಯಲ್ಲಿದೆ.

## ಸಾಧನೆಯ ಕೈಗನ್ನಡಿ - ಪ್ರಗತಿಯ ಪಕ್ಷಿನೋಟ

★ ರಾಜ್ಯಮಟ್ಟದಲ್ಲಿ ಜ್ಞಾನ ಆಯೋಗ ರಚನೆ.

★ ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆ ಅನುಷ್ಠಾನದಲ್ಲಿ ರಾಷ್ಟ್ರದಲ್ಲಿಯೇ ಅಗ್ರಗಣ್ಯ.

★ ಉದ್ಯೋಗ ಖಾತ್ರಿ ಯೋಜನೆಯ ಅನುಷ್ಠಾನಕ್ಕಾಗಿ ಧಾರವಾಡ, ಬೆಳಗಾವಿ ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿ ರಾಷ್ಟ್ರೀಯ ಪುರಸ್ಕಾರ.

★ ಗ್ರಾಮ ಪಂಚಾಯ್ತಿಗಳಿಗೆ ಸಬಲೀಕರಣಕ್ಕಾಗಿ ಕೇಂದ್ರ ಸರ್ಕಾರದಿಂದ ಪ್ರಥಮ ಪ್ರಶಸ್ತಿ.

★ ಸುಜಲಾ ಯೋಜನೆ ಜಾರಿಗಾಗಿ ರಾಷ್ಟ್ರೀಯ ಜಲಪ್ರಶಸ್ತಿ.

★ ಬೆಂಗಳೂರು ಒನ್ ಸೇವಾ ಕೇಂದ್ರಗಳು ಸೇವೆಗಳ ವ್ಯಾಪ್ತಿ ಹಾಗೂ ಜನಮನ್ನಣೆಯಲ್ಲಿ ದೇಶಕ್ಕೇ ಪ್ರಥಮ.

★ ಇ-ಪ್ರೊಕ್ಯೂರ್‌ಮೆಂಟ್ ವ್ಯವಸ್ಥೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಏಷ್ಯಾ ಪ್ರಶಸ್ತಿ ಗೌರವ.

★ 2009ರ ಬಳಿಕ ಇ-ಪಾವತಿ ಅಳವಡಿಸಿಕೊಂಡ ಮೊದಲ ರಾಜ್ಯ ಎಂಬ ಹೆಗ್ಗಳಿಕೆ.

★ ಸಾರಿಗೆ ಸಂಸ್ಥೆಯ ಬಸ್‌ಗಳಲ್ಲಿ ಎಲೆಕ್ಟ್ರಾನಿಕ್ ಟಿಕೆಟ್ ವಿತರಣಾವ್ಯವಸ್ಥೆ ಆರಂಭ. ಇದಕ್ಕೆ ನಗರಾಭಿವೃದ್ಧಿ ಸಚಿವಾಲಯದಿಂದ "ಎಕ್ಸಲೆನ್ಸಿ" ಪ್ರಶಸ್ತಿ.

★ ಕೆಯುಐಡಿಎಫ್‌ಸಿ ಐದು ಜಿಲ್ಲೆಗಳಲ್ಲಿ ಜಾರಿಗೊಳಿಸಿದ ಸರ್ಕಾರ ಮತ್ತು ಖಾಸಗಿ ಸಹಭಾಗಿತ್ವದ ಯೋಜನೆಗಳಿಗಾಗಿ ರಾಷ್ಟ್ರೀಯ ನಗರ ಜಲಪ್ರಶಸ್ತಿ - 2009.

**ಅಭಿವೃದ್ಧಿಯೇ ಆಡಳಿತ ಮಂತ್ರ**


ಕರ್ನಾಟಕ ವಾರ್ತೆ

